# "ಶಿವರಾಮ ಕಾರಂತರ ಮರಳಿ ಮಣ್ಣಿಗೆ- ಒಂದು ಅಧ್ಯಯನ"

(ಹಂಪಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಕನ್ನಡ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)

ಮಾರ್ಗದರ್ಶಕರು:
ಡಾ. ಲಿಂಗರಾಜು ಬೆಳಕೆರೆ
ಮುಖ್ಯಸ್ಥರು, ಕನ್ನಡ ವಿಭಾಗ,
ವಿವೇಕಾನಂದ ಪದವಿ ಕಾಲೇಜು,
ರಾಜಾಜಿನಗರ, ಬೆಂಗಳೂರು-೫೬೦ ೦೧೦

ಸಂಶೋಧನಾ ವಿದ್ಯಾರ್ಥಿ:
ಎಚ್.ಎಸ್. ಬೊಮ್ಮೇಗೌಡ



ಕರ್ನಾಟಕ ಸಂಘ (ರಿ) ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಹಂಪಿ ಕನ್ನಡ ವಿಶ್ವ ವಿದ್ಯಾಲಯದ ಮಾನ್ಯತೆ ಪಡೆದಿದೆ)

೨೦೦೭-೨೦೦೮

# "ಶಿವರಾಮ ಕಾರಂತರ ಮರಳಿ ಮಣ್ಣಿಗೆ-
# ಒಂದು ಅಧ್ಯಯನ"

(ಹಂಪಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಕನ್ನಡ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ)


<u>ಮಾರ್ಗದರ್ಶಕರು</u>:

**ಡಾ. ಲಿಂಗರಾಜು ಬೆಳಕೆರೆ**

ಮುಖ್ಯಸ್ಥರು, ಕನ್ನಡ ವಿಭಾಗ,
ವಿವೇಕಾನಂದ ಪದವಿ ಕಾಲೇಜು,
ರಾಜಾಜಿನಗರ, ಬೆಂಗಳೂರು-೫೬೦ ೦೫೫






<u>ಸಂಶೋಧನಾ ವಿದ್ಯಾರ್ಥಿ</u>:

**ಎನ್.ಎನ್. ದೊಡ್ಡಮೊಗೇಗೌಡ**







ಕರ್ನಾಟಕ ಸಂಘ (ರಿ) ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಹಂಪಿ ಕನ್ನಡ ವಿಶ್ವ ವಿದ್ಯಾಲಯದ ಮಾನ್ಯತೆ ಪಡೆದಿದೆ)

೨೦೦೭-೨೦೦೮

# ಮಾರ್ಗದರ್ಶಕರ ಘೋಷಣಾ ಪತ್ರ

ಎನ್.ಎನ್. ದೊಡ್ಡಮೊಗೇಗೌಡ ಅವರು **"ಶಿವರಾಮ ಕಾರಂತರ ಮರಳಿ ಮಣ್ಣಿಗೆ – ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ಎಂ.ಫಿಲ್. ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧ ಪಡಿಸಿರುತ್ತಾರೆ. ಹಂಪಿಯ ಕನ್ನಡ ವಿಶ್ವ ವಿದ್ಯಾಲಯದ ಕನ್ನಡ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವ ವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

ಮಾರ್ಗದರ್ಶಕರು
ಡಾ: ಲಿಂಗರಾಜು ಬೆಳಕೆರೆ
ಮುಖ್ಯಸ್ಥರು, ಕನ್ನಡ ವಿಭಾಗ,
ವಿವೇಕಾನಂದ ಪದವಿ ಕಾಲೇಜು
ರಾಜಾಜಿನಗರ, ಬೆಂಗಳೂರು–೫೫.

ದಿನಾಂಕ: ೨೫.೦೯.೨೦೦೮
ಸ್ಥಳ: ಮಂಡ್ಯ

# ಅಭ್ಯರ್ಥಿಯ ಘೋಷಣಾ ಪತ್ರ

ಹಂಪಿಯ ಕನ್ನಡ ವಿಶ್ವ ವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀ ಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭-೦೮ನೇ ಸಾಲಿಗೆ **ಎನ್.ಎನ್. ದೊಡ್ಡಮೊಗೇಗೌಡ,** ಎಂ.ಫಿಲ್., ಅಭ್ಯರ್ಥಿಯಾದ ನಾನು ಪ್ರವೇಶ ಪಡೆದಿರುತ್ತೇನೆ. ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಶಿವರಾಮ ಕಾರಂತರ ಮರಳಿ ಮಣ್ಣಿಗೆ- ಒಂದು ಅಧ್ಯಯನ"** ವಿಷಯವನ್ನು ಆಯ್ಕೆ ಮಾಡಿಕೊಂಡು **ಡಾ: ಲಿಂಗರಾಜು ಬೆಳಕೆರೆ** ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ.

ಹಂಪಿ ಕನ್ನಡ ವಿಶ್ವ ವಿದ್ಯಾಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸಹಿ

ದೊಡ್ಡಮೊಗೇಗೌಡ ಎನ್.ಎನ್.

(ಎನ್.ಎನ್. ದೊಡ್ಡಮೊಗೇಗೌಡ)
ಸಂಶೋಧನಾ ವಿದ್ಯಾರ್ಥಿ

ದಿನಾಂಕ: ೨೫.೦೯.೨೦೦೮
ಸ್ಥಳ: ಮಂಡ್ಯ

# <u>ಪರಿವಿಡಿ</u>

## ಅಧ್ಯಾಯ: ೧

## ವಿಷಯ ಪ್ರವೇಶ

ಶಿವರಾಮ ಕಾರಂತರು ಕನ್ನಡದ ಮಹತ್ವದ ಲೇಖಕರು ಮತ್ತು ಚಿಂತಕರು. ಅವರ ಸೃಜನಶೀಲ ವ್ಯಾಪ್ತಿಯ ಹರವು ವ್ಯಾಪಕವಾದುದು. ಕನ್ನಡ ಸಂಸ್ಕೃತಿಯ ವಿಭಿನ್ನ ನೆಲೆಗಳಲ್ಲಿ ಅವರ ಸೃಜನಶೀಲ ಚಟುವಟಿಕೆಗಳು ವಿಸ್ತಾರವಾಗಿ ಹರಡಿಕೊಂಡಿವೆ. ಕಾವ್ಯ, ನಾಟಕ, ಗೀತ ನಾಟಕ, ಕಾದಂಬರಿ, ಸಣ್ಣ ಕತೆ, ವಿಡಂಬನೆ, ಮಕ್ಕಳ ಸಾಹಿತ್ಯ, ಲಲಿತ ಕಲೆಗಳು, ಯಕ್ಷಗಾನ ಬಯಲಾಟ, ಪ್ರವಾಸ ಸಾಹಿತ್ಯ, ಜೀವನ ಚರಿತ್ರೆ, ವಿಚಾರ ಸಾಹಿತ್ಯ- ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ತಮ್ಮ ಸೃಜನಶೀಲತೆಯನ್ನು ಅಭಿವ್ಯಕ್ತ ಪಡಿಸಿರುವವರು ಕಾರಂತರು. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಕೊಟ್ಟ ಅಪಾರವಾದ ಕೊಡುಗೆಯನ್ನು ಗಮನಿಸಿಯೇ ಅವರನ್ನು **"ನಡೆದಾಡುವ ವಿಶ್ವಕೋಶ"** ಎಂದು ಕರೆಯುವರು.

ಕಾರಂತರು ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃಷಿ ಮಾಡಿದ್ದರೂ ಅವರನ್ನು ಪ್ರಮುಖವಾಗಿ ಕಾದಂಬರಿಕಾರರನ್ನಾಗಿ ಗುರುತಿಸುವುದು ಹೆಚ್ಚು ರೂಢಿಯಲ್ಲಿದೆ. ಕಾರಣ ಅವರು ಕನ್ನಡ ಸಾಹಿತ್ಯದ ಕಾದಂಬರಿ ಕ್ಷೇತ್ರಕ್ಕೆ ಕೊಟ್ಟಿರುವ ಕೊಡುಗೆ ಅಪಾರವಾದುದು. ಒಟ್ಟು ೪೫ ಕಾದಂಬರಿಗಳನ್ನು ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಕೊಟ್ಟಿದ್ದಾರೆ. ಹಾಗೆಯೇ ಭಾರತಿಯ ಸಾಹಿತ್ಯ ಕ್ಷೇತ್ರಕ್ಕೆ ನೀಡುವ ಅತ್ಯುನ್ನತ ಪ್ರಶಸ್ತಿಯಾದ ಜ್ಞಾನಪೀಠ ಪ್ರಶಸ್ತಿಯು ಅವರ **'ಮೂಕಜ್ಜಿಯ ಕನಸುಗಳು'** ಕಾದಂಬರಿಗೆ ದೊರೆತಿರುವುದು ಸಹ ಕಾದಂಬರಿ ಕ್ಷೇತ್ರಕ್ಕೆ ಅವರು ನೀಡಿದ ಕೊಡುಗೆಗೆ ಸಂದ ಗೌರವವೆಂದು ಹೇಳಬಹುದು.

ಕಾರಂತರ ಕಾದಂಬರಿ ಸಮಾಜದ ಹಲವಾರು ಮುಖಗಳಿಗೆ ಕನ್ನಡಿಯನ್ನು ಹಿಡಿಯುತ್ತವೆ. ಸ್ವಾತಂತ್ರ್ಯ ಪೂರ್ವದಲ್ಲಿಯೇ ಕಾರಂತರು ತಮ್ಮ ಕಾಲೇಜು ವ್ಯಾಸಂಗವನ್ನು ಅರ್ಧದಲ್ಲಿಯೇ ನಿಲ್ಲಿಸಿ ಹಲವಾರು ಪ್ರಮುಖ ವ್ಯಕ್ತಿಗಳ ಪ್ರಭಾವ ಪ್ರೇರಣೆಗಳಿಗೆ ಒಳಗಾದರು. ಹಾಗೂ ಸ್ವಾತಂತ್ರ್ಯ ಚಳುವಳಿಯಲ್ಲಿಯು ಪಾಲ್ಗೊಂಡರು. ೧೯೨೪ರಲ್ಲಿ ರಚಿಸಿದ **'ವಿಚಿತ್ರ ಕೂಟ'** ಕಾದಂಬರಿಯಿಂದ ಹಿಡಿದು ೧೯೮೬ರ **'ಅಂಟಿದ ಅಪರಂಜಿ'** ಯ ವರೆಗಿನ ಕಾದಂಬರಿಗಳಲ್ಲಿ ಸಮಾಜದಲ್ಲಿನ

ವೈವಿಧ್ಯಮಯವಾದ ಬದುಕನ್ನು ತಮ್ಮ ವಿಸ್ತೃತವಾದ ಅನುಭವದ ನೆಲೆಗಟ್ಟಿನಲ್ಲಿ ಚಿತ್ರಿಸಿದ್ದಾರೆ.

ಸಮಾಜದ ವಿಡಂಬನೆ, ನಿಸರ್ಗ ಮತ್ತು ಮಾನವ ಸಂಬಂಧಗಳು, ಸ್ತ್ರೀಪರ ವಿಚಾರಗಳು, ಸ್ವಾತಂತ್ರ್ಯ ಚಳುವಳಿಗಳು, ಧಾರ್ಮಿಕ ವಿಚಾರಗಳು, ಆಧುನೀಕತೆಯ ಪ್ರಭಾವ ಮತ್ತು ಪರಿಣಾಮಗಳು ಹೀಗೆ ಸಮಾಜದ ಹತ್ತು ಹಲವು ಮುಖಗಳ ಚಿತ್ರಣವನ್ನು ತಮ್ಮ ಕಾದಂಬರಿಯಲ್ಲಿ ಅನುಭವ ಮತ್ತು ವಾಸ್ತವಿಕತೆಯ ಹಿನ್ನೆಲೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

ಕಾರಂತರ ಕಾದಂಬರಿಯನ್ನು ಕುರಿತಂತೆ ಅನೇಕ ವಿದ್ವಾಂಸರು ಮತ್ತು ವಿಮರ್ಶಕರು ಹಲವಾರು ದೃಷ್ಟಿ ಕೋನಗಳಿಂದ ವಿಮರ್ಶೆ ಮತ್ತು ವಿಶ್ಲೇಷಣೆಗಳ ಮೂಲಕ ಒಳಪಡಿಸಿರುವರು. ಇದರ ಹಿನ್ನೆಲೆಯಲ್ಲಿ ಹಲವಾರು ಗ್ರಂಥಗಳು ಮತ್ತು ಲೇಖನಗಳು ಪ್ರಕಟವಾಗಿವೆ. ಕಾರಂತರ ಕಾದಂಬರಿಯನ್ನು ಕುರಿತಂತೆ ಇಷ್ಟೆಲ್ಲ ಅಧ್ಯಯನಗಳು ನಡೆದಿದ್ದರೂ ಇನ್ನೂ ಅನೇಕ ನೆಲೆಗಳಲ್ಲಿ ಅವರ ಕಾದಂಬರಿಗಳನ್ನು ಕುರಿತು ಅಧ್ಯಯನ ಮತ್ತು ವಿಶ್ಲೇಷಣೆಗೆ ಒಳಪಡಿಸಲು ಸಾಧ್ಯವಿದೆ. ಆದ್ದರಿಂದ ನನ್ನ ಈ ಪ್ರಸ್ತುತ ಸಂಶೋಧನ ಪ್ರಬಂಧದ ವಸ್ತುವಾಗಿ ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯನ್ನು ಕುರಿತು ಅಧ್ಯಯನವನ್ನು ಕೈಗೊಂಡಿದ್ದೇನೆ.

ಈ ಅಧ್ಯಯನದಲ್ಲಿ ಮುಖ್ಯವಾಗಿ ಕಾದಂಬರಿಯನ್ನು ಸಂಶೋಧನೆಯ ಅನುಕೂಲಕ್ಕಾಗಿ ಹಲವು ನೆಲೆಗಳಲ್ಲಿಟ್ಟು ನೋಡಲು ಪ್ರಯತ್ನಿಸಲಾಗಿದೆ. ಆದರ್ಶಪರತೆ, ವಸ್ತು, ಭಾಷೆ, ತಂತ್ರ , ಗಂಡು ಹೆಣ್ಣಿನ ಸಂಬಂಧದ ನೆಲೆಗಳು ಮತ್ತು ಪ್ರಾದೇಶಿಕತೆಯ ಪ್ರತಿನಿಧೀಕರಣದ ಬಗ್ಗೆ ಹಬ್ಬಿಸಿ ಅಧ್ಯಯನಕ್ಕೆ ಒಳಪಡಿಸುವುದು ಅತ್ಯಂತ ಕುತೂಹಲ.

ಈ ಕಾದಂಬರಿಯನ್ನು ಹೆಚ್ಚು ಅಧ್ಯಯನಕ್ಕೆ ಗುರಿಪಡಿಸುತ್ತಾ ಹೋದರೆ ಸ್ವಾತಂತ್ರ್ಯ ಚಳುವಳಿಯ ನೆನಪು ಸಹ ಮೂಡುತ್ತದೆ. ಅಲ್ಲದೆ ಕಾರಂತರು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಗಾಂಧೀಜಿ ಮತ್ತು ಠಾಕೂರರ ಪ್ರಭಾವ ಪ್ರೇರಣೆಗಳಿಗೆ ಒಳಗಾದವರು ಎಂಬ ವಿಷಯವು ಮನದಟ್ಟಾಗುತ್ತದೆ. ಆದರ್ಶ ಮತ್ತು ವಾಸ್ತವಗಳ ನೆಲೆಯಲ್ಲಿ ಗಂಭೀರವಾಗಿ ಪರಿಗಣಿಸಿದ ಮಹತ್ವದ

ಚಿಂತನಶೀಲರು. ಈ ಚಿಂತನಶೀಲತೆಯ ಸ್ವರೂಪವನ್ನು ಹಾಗೂ ಅದರ ಮುಂದುವರಿಕೆಯ ನೆಲೆಗಳನ್ನು ಅಭ್ಯಸಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆಯೆಂದು ಭಾವಿಸಿಕೊಂಡಿದ್ದೇನೆ.

ಕಾರಂತರು ಮತ್ತು ಅವರ ಕೃತಿಯನ್ನು ಕುರಿತು ಇದುವರೆಗೂ ನೂರಾರು ಲೇಖನಗಳು ಹಾಗೂ ವಿಮರ್ಶಾ ಕೃತಿಗಳು ಪ್ರಕಟವಾಗಿವೆ. ಪ್ರತಿಯೊಂದು ಕೃತಿಯು ತನ್ನದೇ ಆದ ವಸ್ತು ವೈವಿಧ್ಯತೆಯ ವಿಶ್ಲೇಷಣೆಯೊಂದಿಗೆ ಕಾರಂತರ ಸಾಹಿತ್ಯದ ಒಳನೋಟಗಳನ್ನು ಕುರಿತು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಇದುವರೆಗೂ ಪ್ರಕಟವಾಗಿರುವ ಕೃತಿಗಳಲ್ಲಿ ತುಂಬ ಮುಖ್ಯವಾದ ಕೃತಿಗಳ ಸ್ವರೂಪವನ್ನು ಮಾತ್ರ ಇಲ್ಲಿ ಸೂಕ್ಷ್ಮವಾಗಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಕಾರಂತರ ಕಾದಂಬರಿಯನ್ನು ಕುರಿತು ಮೊದಲ ಬಾರಿಗೆ ೧೯೪೪ರಲ್ಲಿ ಎಸ್. ಅನಂತನಾರಯಣರ 'ಕಾರಂತರ ಕಾದಂಬರಿಗಳು' ಎಂಬ ವಿಮರ್ಶಾ ಕೃತಿಯು ಪ್ರಕಟವಾಗಿದೆ. ಇದರಲ್ಲಿ ಮುಖ್ಯವಾಗಿ ಕಾದಂಬರಿಗಳ ವಸ್ತು ಚಿತ್ರಣ, ಕಥಾನಕ, ಪಾತ್ರ ನಿರೂಪಣೆ, ಶೈಲಿ, ನಿಸರ್ಗದ ಚಿತ್ರಣ, ಸಮಾಜದ ಚಿತ್ರಣ. . . . ಇತ್ಯಾದಿಯಾಗಿ ಕಾರಂತರ ಆರಂಭದ ಕಾದಂಬರಿಯಾದ 'ವಿಚಿತ್ರ ಕೂಟ'ದಿಂದ "ಔದಾರ್ಯದ ಉರುಳಲ್ಲಿ" ಕಾದಂಬರಿಯವರೆಗಿನ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ.

"ಶಿವರಾಮ ಕಾರಂತ" ಕೃತಿಯು ೧೯೪೬ರಲ್ಲಿ ವಿ. ಸೀತಾರಾಮಯ್ಯನವರಿಂದ ಪ್ರಕಟವಾಗಿದೆ. ಈ ಕೃತಿಯಲ್ಲಿ ಕಾರಂತರ ಕಾದಂಬರಿಯನ್ನು ಕುರಿತಂತೆ ತೀ.ನಂ. ಶ್ರೀಕಂಠಯ್ಯ, ಎ.ಎನ್. ಮೂರ್ತಿ ರಾವ್ ಮುಂತಾದವರ ಪ್ರಮುಖ ಲೇಖನಗಳಿವೆ. ಈ ಕೃತಿಯು ಕಾರಂತರ ಸಾಹಿತ್ಯ ಕೃತಿಗಳ ವಿಶ್ಲೇಷಣೆಯಲ್ಲಿ ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. 'ಕಾರಂತ ಪ್ರಪಂಚ' ೧೯೬೮ರಲ್ಲಿ ಕಾರಂತರ ಅಭಿನಂದನಾ ಸಮಿತಿಯ ವತಿಯಿಂದ ಪ್ರಕಟವಾದಂತಹ ಕೃತಿ. ಇದರಲ್ಲಿ ಕಾರಂತರು ಮತ್ತು ಅವರ ಕೃತಿಗಳನ್ನು ಕುರಿತ ಹಲವಾರು ವಿಮರ್ಶಾ ಲೇಖನಗಳಿವೆ. ಅವುಗಳಲ್ಲಿ ಮುಖ್ಯವಾಗಿ ಡಿ.ಎಲ್. ನರಸಿಂಹಾಚಾರ್, ಯು.ಆರ್. ಅನಂತಮೂರ್ತಿ, ಜಿ.ಹೆಚ್. ನಾಯಕ, ಜಿ.ಎಸ್. ಆಮೂರ, ಗಿರಡ್ಡಿ ಗೋವಿಂದರಾಜ, ಕೀರ್ತಿನಾಥ ಕುರ್ತುಕೋಟಿ, ಎಲ್.ಎಸ್. ಶೇಷಗಿರಿ ರಾವ್ ಮುಂತಾದ ಒಟ್ಟು ೬೦ ವಿದ್ವಾಂಸರ

ಮಹತ್ವ ಪೂರ್ಣ ಲೇಖನಗಳಿವೆ. ಈ ಲೇಖನಗಳಿಂದ ಕಾರಂತರ ಸಾಹಿತ್ಯ ಕೃತಿಗಳ ಕುರಿತು ಹಲವಾರು ವಿಭಿನ್ನ ಒಳನೋಟಗಳನ್ನು ಮುಖ್ಯವಾಗಿ ಗುರುತಿಸಬಹುದು. ಆದ್ದರಿಂದ ಇದು ಕಾರಂತರ ಮತ್ತು ಅವರ ಸಾಹಿತ್ಯ ಕುರಿತು ಬಂದಿರುವ ಮಹತ್ವದ ಕೃತಿ.

'ಅಭಿನಂದನ' ೧೯೭೦ರಲ್ಲಿ ಕಾರಂತರ ಅಭಿನಂದನಾ ಕಾರ್ಯಕ್ರಮದ ಸಲುವಾಗಿ ಪ್ರಕಟವಾಗಿರುವಂತಹ ಕೃತಿ. ಈ ಕೃತಿಯಲ್ಲಿ ಕಾರಂತರ ಮತ್ತು ಅವರ ಕಾದಂಬರಿಗಳನ್ನು ಕುರಿತು ಎಂ. ಗೋಪಾಲಕೃಷ್ಣ ಅಡಿಗ, ಹಾ.ಮಾ. ನಾಯಕ, ಸಿಂಪಿ ಲಿಂಗಣ್ಣ, ಮುಂತಾದವರ ಪ್ರಮುಖ ಲೇಖನಗಳಿವೆ. ಕಾರಂತರ ಕೃತಿಗಳನ್ನು ಕುರಿತ ವಿದ್ವಾಂಸರ ಈ ಲೇಖನಗಳಿಂದ ಕೃತಿಗಳ ಒಳನೋಟಗಳನ್ನು ಗುರುತಿಸಬಹುದಾಗಿದೆ. 'ಶಿವರಾಮ ಕಾರಂತರ ಬದುಕು ಬರಹ' ಇದು ೧೯೭೮ರಲ್ಲಿ ವಿ.ಎಂ. ಇನಾಂದಾರರು ರಚಿಸಿದ ಕೃತಿ. ಈ ಕೃತಿಯಲ್ಲಿ ಕಾರಂತರು ಸಾಹಿತ್ಯ ಕ್ಷೇತ್ರಕ್ಕೆ ಪತ್ರಿಕಾ ವ್ಯವಸಾಯದ ಮೂಲಕ ಪ್ರವೇಶ ಮಾಡಿರುವುದು "ಅನುಭವಗಳು" ವಸಂತ ಪತ್ರಿಕೆ ಎಂಬ ಪಾಕ್ಷಿಕ ಪತ್ರಿಕೆಯನ್ನು ೧೯೨೪ರಲ್ಲಿ ಪ್ರಾರಂಭಮಾಡಿರುವುದು. ಹಾಗೆ ಅಂದಿನ ಸಮಕಾಲೀನ ಜೀವನದ ಪ್ರಮುಖ ವಿಚಾರಗಳಾದ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ವಿಚಾರಗಳನ್ನು ಕುರಿತಂತಹ ಅನುಭವಗಳು ಮತ್ತು ಚರಿತ್ರೆ, ಕಲೆ, ವಿಜ್ಞಾನ, ಪಾನನಿರೋಧ, ಅಹಿಂಸೆ ಮುಂತಾದ ಕಾರಂತರ ವೈಚಾರಿಕ ವಿವರಗಳನ್ನು ಈ ಕೃತಿಯಲ್ಲಿ ಮುಖ್ಯವಾಗಿ ಗಮನಿಸಬಹುದಾಗಿದೆ.

"ಕಾರಂತ ಕಿರಣ" ೧೯೭೮ರಲ್ಲಿ ಎಲ್.ಎಸ್ ಶೇಷಗಿರಿರಾವ್ ಸಂಪಾದಕತ್ವದಲ್ಲಿ ಪ್ರಕಟವಾದ ಕೃತಿ. ಕಾರಂತರ ಮೂಕಜ್ಜಿಯ ಕನಸುಗಳು ಕಾದಂಬರಿಗೆ ಜ್ಞಾನಪೀಠ ಪ್ರಶಸ್ತಿಯು ದೊರೆತ ಕಾರಣ ಕಾರಂತರನ್ನು ಅಭಿನಂದಿಸುವ ಸಲುವಾಗಿ ಬರೆದಿರುವ ಲೇಖನಗಳು ಇವು. ಈ ಕೃತಿಯಲ್ಲಿರುವ ಒಟ್ಟು ೧೪ ಲೇಖನಗಳಾದ ಕಾರಂತರು ಮತ್ತು ಅವರ ಸಾಹಿತ್ಯ ಕೃತಿಗಳ ಹಲವಾರು ಒಳನೋಟಗಳನ್ನು ಬಿಂಬಿಸುವಲ್ಲಿ ಈ ಕೃತಿಯು ತುಂಬ ಮುಖ್ಯವಾದದು. "ಹತ್ತು ಮುಖ" ಅಭಿನಂದನ ೧೯೭೮ರಲ್ಲಿ ಕಾರಂತರ ಅಭಿನಂದನಾ ಸಮಿತಿಯ ವತಿಯಿಂದ ಪ್ರಕಟಿತವಾದ ಕೃತಿ. ಈ ಕೃತಿಯಲ್ಲಿಯೂ ಕಾರಂತರ ಸಾಹಿತ್ಯ ಕೃತಿಗಳನ್ನು ಕುರಿತು ಹಲವಾರು ಒಳನೋಟಗಳನ್ನು ಮುಖ್ಯವಾಗಿ ಗುರುತಿಸಬಹುದಾಗಿದೆ. ಕಾರಂತರ ಕಾದಂಬರಿಗಳಲ್ಲಿ

"ಗಂಡು ಹೆಣ್ಣು" ೧೯೮೨ರಲ್ಲಿ ಟಿ.ಪಿ. ಅಶೋಕರಿಂದ ರಚಿತವಾದ ಕೃತಿ. ಈ ಕೃತಿಯಲ್ಲಿ ಕಾರಂತರ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಗಂಡು ಹೆಣ್ಣಿನ ಸಂಬಂಧಗಳನ್ನು ಕುರಿತು ವಿವಿಧ ರೀತಿಯ ಒಳನೋಟಗಳನ್ನು ಕಟ್ಟಿಕೊಡಲಾಗಿದೆ.

"ಶಿವರಾಮ ಕಾರಂತ ಹತ್ತು ಅಧ್ಯಯನಗಳು". ೧೯೮೨ರಲ್ಲು ಶಿವರಾಮ ಕಾಡನಕುಪ್ಪೆ ಸಂಪಾದಕತ್ವದಲ್ಲಿ ಪ್ರಕಟವಾದಂತಹ ಕೃತಿ. ಈ ಕೃತಿಯಲ್ಲಿ ಕಾರಂತರ ಕಾದಂಬರಿ, ನಾಟಕ , ಯಕ್ಷಗಾನ ಮುಂತಾದವುಗಳ ಕುರಿತು ಪೋಲಂಕಿ ರಾಮಮೂರ್ತಿ, ಲಿಂಗದೇವರು ಹಳೆಮನೆ, ಶಿವರಾಮ ಕಾಡನಕುಪ್ಪೆ, ಕೆ. ರಾಮದಾಸ್, ಹಿ.ಶಿ. ರಾಮಚಂದ್ರಗೌಡ. . . ಇನ್ನೂ ಮುಂತಾದವರ ಲೇಖನಗಳಿವೆ. ಕಾರಂತರ ಮತ್ತು ಅವರ ಸಾಹಿತ್ಯ ಕೃತಿಗಳ ವಿಭಿನ್ನ ನೋಟಗಳನ್ನು ಮುಖ್ಯವಾಗಿ ಈ ಕೃತಿಯಲ್ಲಿ ಗುರುತಿಸಬಹುದಾಗಿದೆ. "ಕಾದಂಬರಿಕಾರರಾಗಿ ಕಾರಂತ" ೧೯೮೩ರಲ್ಲಿ ಜಿ.ಎಸ್. ಶಿವರುದ್ರಪ್ಪರವರ ಸಂಪಾದಕತ್ವದಲ್ಲಿ ಪ್ರಕಟವಾದ ಕೃತಿ. ಕನ್ನಡ ಅಧ್ಯಯನ ಕೇಂದ್ರವು ಏರ್ಪಡಿಸಿದ್ದ ವಿಚಾರ ಸಂಕಿರ್ಣದಲ್ಲಿ ಮಂಡಿಸಿದ್ದ ಕಾರಂತರ ಒಟ್ಟು ಕಾದಂಬರಿಗಳ ಕೃತಿಗಳ ಮೇಲೆ ಈ ಲೇಖನಗಳು ಬೆಳಕು ಚಲ್ಲುತ್ತವೆ. ಈ ಕೃತಿಯಲ್ಲಿ ಮುಖ್ಯವಾಗಿ ಎಸ್.ಎಲ್. ಬೈರಪ್ಪ, ಡಿ.ಆರ್. ನಾಗರಾಜ, ಜಿ.ಹೆಚ್. ನಾಯಕ, ಕೆ.ವಿ. ನಾರಾಯಣ. . . . ಇನ್ನೂ ಮುಂತಾದವರ ಮಹತ್ವ ಪೂರ್ಣವಾದ ೧೫ ಲೇಖನಗಳನ್ನು ಈ ಕೃತಿ ಒಳಗೊಂಡಿದೆ. ಕಾರಂತರ ಮತ್ತು ಅವರ ಕಾದಂಬರಿಗಳ ಕುರಿತಾದ ವಿಭಿನ್ನ ಆಯಾಮಗಳನ್ನು ಈ ಕೃತಿಯು ಗುರುತಿಸುವಲ್ಲಿ ಪ್ರಮುಖವಾದದು. ಕಾರಂತರ ಕಾದಂಬರಿಗಳನ್ನು ಕುರಿತಂತೆ ವಿಮರ್ಶೆಯ ಕ್ಷೇತ್ರಕ್ಕೆ ಇದೊಂದು ಮೌಲಿಕವಾದ ಕೃತಿ.

"ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಆಧುನೀಕರಣದ ಪ್ರಕ್ರಿಯೆ" ೧೯೯೦ರಲ್ಲಿ ಟಿ.ಪಿ. ಅಶೋಕರಿಂದ ರಚಿತವಾದ ಕೃತಿಯಾಗಿದೆ. ಈ ಕೃತಿಯಲ್ಲಿ ಕಾರಂತರ ಕಾದಂಬರಿಗಳಲ್ಲಿ ಅದರಲ್ಲಿಯೂ ವಿಶೇಷವಾಗಿ ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ಆಧುನಿಕತೆಯ ಪ್ರವೇಶ, ಮನುಷ್ಯನ ದೈನಂದಿನ ಜೀವನದಲ್ಲಿ ಯಾವರೀತಿಯಾಗಿ ಪ್ರವೇಶಿಸುತ್ತದೆ ಎಂಬುದನ್ನು ಗುರುತಿಸಲಾಗಿದೆ. ಪ್ರತಿಯೊಂದು ಪಾತ್ರದಲ್ಲಿಯೂ ಮತ್ತು ಪರಿಸರದಲ್ಲಿಯೂ ಅದರ ಪ್ರವೇಶವನ್ನು ಕುರಿತು ಹಾಗೂ ಅದು ಮನುಷ್ಯನ ಮೇಲೆ ಉಂಟುಮಾಡುವ ಪರಿಣಾಮಗಳನ್ನು ಕುರಿತಂತೆ ಕಾರಂತರ ಕಾದಂಬರಿಗಳ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ. ಆಧುನಿಕ ವಿದ್ಯಾಭ್ಯಾಸ, ನಾಗರೀಕತೆ

ಇತ್ಯಾದಿಗಳನ್ನು ಪಾತ್ರಗಳ ಮೂಲಕ ಗುರುತಿಸಬಹುದಾಗಿದೆ. "ಕಾದಂಬರಿ ಕಣ್ಣಲ್ಲಿ ಕಾರಂತರು" ೧೯೯೨ರಲ್ಲಿ ನ, ರವಿಕುಮಾರ್ ಸಂಪಾದಕತ್ವದಲ್ಲಿ ಪ್ರಕಟಿತವಾದ ಕೃತಿಯಾಗಿದೆ. ಕಾರಂತರ ಎಲ್ಲಾ ಕಾದಂಬರಿಗಳನ್ನು ಕುರಿತಂತೆ ಹಲವು ವಿಮರ್ಶಕರ ಪ್ರಮುಖ ಲೇಖನಗಳಿವೆ. ಜಿ. ಶ್ರೀನಿವಾಸಮೂರ್ತಿ, ಟಿ.ಪಿ. ಅಶೋಕರು "ಮರಳಿ ಮಣ್ಣಿಗೆ" ಕಾದಂಬರಿ ಕುರಿತು ಹಲವು ರೀತಿಯ ಒಳನೋಟಗಳನ್ನು ಪ್ರಕಟಿಸುತ್ತಾರೆ.

"ಕಾರಂತರ ಕಾದಂಬರಿಗಳಲ್ಲಿ ನಿಸರ್ಗ" ೧೯೯೨ರಲ್ಲಿ ಎಸ್. ಅಂತನಾರಾಯಣರು ರಚಿಸಿದ ವಿಮರ್ಶಾಕೃತಿ. ಕಾರಂತರ ಮರಳಿ ಮಣ್ಣಿಗೆ ಮುಂತಾದ ಕಾದಂಬರಿಗಳಲ್ಲಿ ನಿಸರ್ಗವು ಪ್ರಧಾನವಾಗಿ ಯಾವ ರೀತಿಯಲ್ಲಿ ಚಿತ್ರಣಗೊಂಡಿದೆ ಎಂಬುದನ್ನು ಗುರುತಿಸಲಾಗಿದೆ.

"ಕನ್ನಡ ಸಾಹಿತ್ಯ ಈ ಶತಮಾನದ ನೋಟ" ಶಿವರಾಮ ಕಾರಂತ ೧೯೯೩ರಲ್ಲಿ ಟಿ.ಪಿ ಅಶೋಕರಿಂದ ಸಂಪಾದಿತವಾದ ಕೃತಿ. ಈ ಕೃತಿಯಲ್ಲಿ ಮುಖ್ಯವಾಗಿ ಶಿವರಾಮ ಕಾರಂತರ ಮತ್ತು ಅವರ ಕೃತಿಗಳನ್ನು ಕುರಿತು ವಿವಿಧ ಕಡೆಗಳಲ್ಲಿ ಪ್ರಕಟಿತವಾಗಿರುವ ವಿಮರ್ಶಾತ್ಮಕ ಬರಹಗಳನ್ನು ಒಂದೆಡೆ ಸಂಗ್ರಹಿಸಿಕೊಂಡು ಅವುಗಳಿಂದ ಕೆಲವು ಮುಖ್ಯವಾದ ಸಾಲುಗಳನ್ನು ಆಯ್ದುಕೊಂಡು ಒಂದು ಕ್ರಮದಲ್ಲಿ ಜೋಡಿಸಿ ಈ ಕೃತಿಯನ್ನು ಸಿದ್ಧಗೊಳಿಸಲಾಗಿದೆ. ಈ ಕೃತಿಯಲ್ಲಿ ಕೃತಿಗಳ ವಸ್ತು, ಭಾಷೆ, ನಿರೂಪಣಾ ತಂತ್ರ, ನಿಸರ್ಗ, ಆಧುನೀಕರಣ, ಗಂಡು ಹೆಣ್ಣಿನ ಸಂಬಂಧ ಇತ್ಯಾದಿಯಾಗಿ ಹಲವಾರು ವಿಮರ್ಶಕರ ವಿಶ್ಲೇಷಣೆಗಳನ್ನು ಗುರುತಿಸಲು ಸಹಕಾರಿಯಾಗುವುದು.

"ಕಾರಂತ ಮಂಥನ" ೧೯೯೪ರಲ್ಲಿ ಟಿ.ಪಿ. ಅಶೋಕರಿಂದ ಸಂಪಾದಿತವಾದ ಕೃತಿ. ಕಾರಂತರ ಎಲ್ಲಾ ಕಾದಂಬರಿಗಳನ್ನು ಕುರಿತ ಹಲವಾರು ವಿಮರ್ಶಾ ಲೇಖನಗಳಿವೆ. "ಕಾದಂಬರಿ ಪ್ರಪಂಚ" ಎಂಬ ಅಭಿನಂದನಾ ಗ್ರಂಥವು ೧೯೬೯ರಲ್ಲಿ ಕು.ಶಿ. ಹರಿದಾಸ ಭಟ್ಟರಿಂದ ಸಂಪಾದಿತವಾದ ಕೃತಿಯಾಗಿದೆ. ಈ ಕೃತಿಯಲ್ಲಿ ಹಲವು ಶ್ರೇಷ್ಠ ವಿಮರ್ಶಕರ ಲೇಖನಗಳಿವೆ.

ಡಿ.ಎಲ್.ಎನ್, ಎ.ಎನ್. ಮೂರ್ತಿರಾಯ, ಟಿ.ಪಿ. ಅಶೋಕ, ಗೋಪಾಲಕೃಷ್ಣ ಅಡಿಗ, ಮುಂತಾದವರು "ಮರಳಿ ಮಣ್ಣಿಗೆ" ಕುರಿತು ತಮ್ಮದೇ ಆದ

ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅದೇರೀತಿ ಕಾರಂತರ ಕಾದಂಬರಿಯನ್ನು ಕುರಿತಂತೆ ಸಾಧನೆ, ಶೂದ್ರ, ಸಾಕ್ಷಿ, ಪ್ರಬುದ್ಧ ಕರ್ನಾಟಕ ಇತ್ಯಾದಿ ಸಂಚಿಕೆಗಳಲ್ಲಿ, ಪ್ರಜಾವಾಣಿ, ಕನ್ನಡ ಪ್ರಭ ಇತ್ಯಾದಿ ಹತ್ತು ಹಲವು ಪತ್ರಿಕೆಗಳಲ್ಲಿ ಪ್ರಮುಖವಾದ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ.

ಕಾದಂಬರಿ ಕುರಿತ ಹಲವು ಮಂದಿ ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. "ತಮ್ಮ ಕಾದಂಬರಿಗಳಲ್ಲಿ ಕಾರಂತರು ನೂರಾರು ಬಗೆಯ ಕಾಲ್ಪನಿಕ ಹೆಣ್ಣು ಗಂಡುಗಳನ್ನು ಸೃಷ್ಠಿಸಿ ಬದುಕಿನ ಸಾವಿರಾರು ವಿಚಾರಗಳಿಂದ ತುಂಬಿದ ಬ್ರಹ್ಮಾಂಡವನ್ನೇ ನಿರ್ಮಿಸಿದ್ದಾರೆ. ಈ ಸೃಷ್ಠಿಗೆಲ್ಲಾ ಅವರ ಸ್ವಂತ ತುಂಬು ಜೀವನವೇ ಗಟ್ಟಿಯಾದ ಸತ್ವ ಪೂರ್ಣವಾದ ಸಾಮಗ್ರಿಯನ್ನು ಒದಗಿಸಿದೆಯೆಂದು ಅರಿತಾಗ ಈ ಆತ್ಮ ವೃತಾಂತ ಎಷ್ಟರಮಟ್ಟಿಗೆ ಅವರ ಕಾದಂಬರಿಗಳ ಅಭ್ಯಾಸಕ್ಕೆ ನೆರವಾದಿತು ಎಂಬುದನ್ನು ಗುರುತಿಸಲು ಸಾದ್ಯ".೧ ಎಂದು ಜಿ.ಹೆಚ್. ನಾಯಕರು ಅಭಿಪ್ರಾಯ ಪಡುತ್ತಾರೆ. ಕಿ.ರಂ. ನಾಗರಾಜ ಅವರು "ಕನ್ನಡದ ಸಂದರ್ಭದಲ್ಲಿ ಬೇರೆ ಬೇರೆ ರೀತಿಯ ಶಿಸ್ತುಗಳು ಇನ್ನೂ ಅಷ್ಟು Sharpen ಆಗಿರದ ಕಾಲದಲ್ಲಿ ಕಾದಂಬರಿಯ ಮುಖಾಂತರ ಬೇರೆ ಬೇರೆ ಶಿಸ್ತುಗಳ ಮೂಲಕ ಚಿಂತನೆಯನ್ನು ಬೆಳಸಿದ್ದೆ ಕಾರಂತರ ತುಂಬ ದೊಡ್ಡ ಸಾಧನೆ. (Achivement) ಮತ್ತು He is an all time Novelist. ಎಲ್ಲಾ ಕಾಲದ ಕಾದಂಬರಿಕಾರ".೨ ಎಂದು ಹೇಳಿದ್ದಾರೆ.

ಗಿರಡ್ಡಿ ಗೋವಿಂದ ರಾಜ "ಕನ್ನಡ ಕಾದಂಬರಿಕಾರರಲ್ಲಿ ಶಿವರಾಮ ಕಾರಂತರದ್ದೇ ಒಂದು ವಿಶಿಷ್ಠ ರೀತಿ. ಅವರಷ್ಟು ಆಸಕ್ತಿಗಳನ್ನು ಹೊಂದಿದ ಲೇಖಕರು ಇನ್ನೊಬ್ಬರಿಲ್ಲ. ಈ ಆಸಕ್ತಿಗಳು ವಿಪುಲವಾಗಿರುವಂತೆ, ವೈವಿಧ್ಯ ಪೂರ್ಣವು ಆಗಿವೆ. ಅಲ್ಲದೆ ಈ ಆಸಕ್ತಿಗಳಲ್ಲಿ ಮೇಲು ಮೇಲಿನ ತಿಳುವಳಿಕೆ ಮಾತ್ರವಲ್ಲ ವಿಷಯದ ತಲಸ್ಪರ್ಶಿಯಾದ ಜ್ಞಾನ ಮತ್ತು ಬದುಕಿನ ಮೂಲಕ ಆ ವಿಷಯವನ್ನು ಅನ್ವೇಷಿಸುವ ಅರ್ಥ ಪೂರ್ಣವಾದ ರೀತಿಗಳಿಂದಾಗಿ, ಸಾಹಿತ್ಯಕವಾಗಿ ಈ ವಿಷಯಗಳು ಮಹತ್ವ ಪಡೆಯುತ್ತವೆ".೩ ಎಂದು ಹೇಳಿದ್ದಾರೆ.

ಆದೇ ರೀತಿ ಎಲ್.ಎಸ್. ಶೇಷಗಿರಿ ರಾವ್ "ಕಾರಂತರ ಪ್ರಭಾವ ಕನ್ನಡ ಕಾದಂಬರಿಯಲ್ಲಿ ಮಿತವಾದದ್ದು. ಇದಕ್ಕೆ ಕಾರಣ ಪ್ರಾಯಶಃ ಅವರ ಮಾರ್ಗ

ಕಷ್ಟವಾದುದು ಎಂಬುದು. ಬರೆದ ಕಾದಂಬರಿಗಳ ಸಂಖ್ಯೆ ಮಹತ್ವದ್ದಾಗುವಾಗ ತಿಂಗಳಿಗೊಂದರಂತೆ ಕಾದಂಬರಿ ಬರೆದು ಎಸೆಯುವವರುವಾಗ ವರ್ಷಕ್ಕೊಂದು ಕಾದಂಬರಿ ಬರೆಯುವ ಕಾರಂತರ ಸಂಯಮ ಕಷ್ಟದ್ದು. ಅದರಲ್ಲಿ ಘೋಷಣೆಗಳಿಲ್ಲ, ನಾಟಕೀಯ ದೃಶ್ಯಗಳಿಲ್ಲ, ಕಣ್ಣಿಗೆ ಹೊಡೆಯುವ ತಂತ್ರವಿಲ್ಲ. ಆದರೆ ಗಟ್ಟಿಯಾದ ಅನುಭವದ ದೃಷ್ಟಿಯಿಂದ ರಾವ್ ಬಹೂದ್ದೂರರು, ವ್ಯಾಸರಾಯ ಬಲ್ಲಾಳ ಜೀವನದ ಪರೀಕ್ಷೆ ವಿಧಾನದಿಂದ, ಅನಂತ ಮೂರ್ತಿ ಒಟ್ಟು ಕಾದಂಬರಿ ವಿಧಾನದಿಂದ ಎಸ್.ಎಲ್. ಬೈರಪ್ಪ . . . ಹೀಗೆ ಕೆಲವರಾದರೂ ಕಾರಂತರ ಕಾದಂಬರಿಯ ಹಾದಿಯಲ್ಲಿ ಹೆಜ್ಜೆ ಹಾಕಿದ್ದಾರೆ."೪ ಎಂದು ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಕೀರ್ತಿನಾಥ ಕುರ್ತುಕೋಟಿರವರು "ಕಾರಂತರು ಯಾವ ಸಂಪ್ರಾದಾಯಕ್ಕೂ ಸೇರಿದವರಲ್ಲ, ಅದಕ್ಕೂ ಹೆಚ್ಚಾಗಿ ಯಾವ ಸಂಪ್ರಾದಾಯವನ್ನೂ ನಿರ್ಮಿಸಲಿಲ್ಲ.ಇದಕ್ಕೆ ಕಾರಣವೆಂದರೆ ಅವರ ತೀರ ಸ್ವತಂತ್ರವಾದ ಮನೋವೃತ್ತಿಯೆನ್ನಬಹುದು. ಅವರ ಶೈಲಿ ಈ ಸ್ವತಂತ್ರ ದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ. ವಸ್ತುವಿನ ಗಟ್ಟಿತನವೊಂದನ್ನು ಬಿಟ್ಟರೆ ಬೇರೇನೂ ಅವರಲಿಲ್ಲ. ಆದ್ದರಿಂದಾಗಿ ಪಾತ್ರಗಳು ತಾವಾಗಿ ಹುಟ್ಟಿಕೊಳ್ಳುತ್ತವೆ. ಭಾಷೆ ಸಜೀವತೆಯಿಂದ ಮೈದುಂಬಿಕೊಳ್ಳುತ್ತದೆ. ಬುದ್ಧಿ ಪೂರ್ವಕವಾಗಿ ವಸ್ತುವನ್ನು ತಿದ್ದಿ ಮಾರ್ಪಡಿಸಿ ಒಂದು ತಂತ್ರಕ್ಕೆ ಅವರೆಂದೂ ಅಳವಡಿಸುವುದಿಲ್ಲ. ಆದರೆ ಅವರ ಯಾವ ಪಾತ್ರವು ನಾಟಕೀಯವಾಗಿ ವರ್ತಿಸುವುದಿಲ್ಲ. ವಾಸ್ತವ ಮಾರ್ಗದ ಕನ್ನಡ ಕಾದಂಬರಿ ಭಾವನಾ ಪರವಶತೆಯ ಸೆಳವಿಗೆ ಸಿಕ್ಕಿ ತನ್ನ ಸ್ವರೂಪವನ್ನು ನಾಶಮಾಡಿಕೊಳ್ಳುತ್ತಿರುವ ಹೊತ್ತಿನಲ್ಲಿ ಅದನ್ನೂ ಉದ್ದರಿಸಿ ಅದರ ಗೌರವವನ್ನು ಕಾಯ್ದ ಶ್ರೇಯಸ್ಸು ಕಾರಂತರಿಗೆ ಸಲ್ಲುತ್ತದೆ."೫ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತ ಪಡಿಸುತ್ತಾರೆ.

ತಿ.ನಂ.ಶ್ರೀ ಯವರು "ಶಿವರಾಮ ಕಾರಂತರು ನಮ್ಮ ತಲೆಮಾರಿನ ಕನ್ನಡದ ಕ್ರಾಂತಿ ಪುರುಷರಲ್ಲಿ ಒಬ್ಬರು. ಅವರ ಪ್ರತಿಭೆಗೆ ಅಳವಡದ ಕಲೆ ಇಲ್ಲ. ಅವರ ಲೇಖನಿಯಿಂದ ಸತತವಾಗಿ ಹೊರ ಬೀಳುತ್ತಿರುವ ಕೃತಿಗಳಲ್ಲಿ ಹಲವನ್ನು ಓದಿ ಮೆಚ್ಚಿರುವ ಅನೇಕ ಮಂದಿ ಕನ್ನಡಿಗರಲ್ಲಿ ನಾನು ಒಬ್ಬ. ದೂರದಿಂದ ಮಾತ್ರವಲ್ಲದೆ ಹತ್ತಿರದಿಂದಲೂ ಅವರ ಬಹು ಮುಖದ ಕಾರ್ಯೋತ್ಸಾಹವನ್ನು ಆಗಾಗ ನಿರೀಕ್ಷಿಸಿ ಬೆರಗಾಗಿದ್ದೇನೆ"೬ ಎಂದು ಹೇಳುವರು.

ಎಸ್.ಎಲ್. ಬೈರಪ್ಪ "ನಮ್ಮಲ್ಲಿ ಒಂದು ಪ್ರಧಾನ ಪ್ರಕಾರದಲ್ಲಿ ಬರೆಯುವುದರ ಜೊತೆಗೆ ಇತರ ಪ್ರಕಾರಗಳಲ್ಲೂ ಕೈಯಾಡಿಸಿರುವ ಲೇಖಕರಿದ್ದಾರೆ. ಮೂಲತಃ ಕವಿಯಾದ ಬೇಂದ್ರೆಯವರು ನಾಟಕ, ಕಥೆ, ಹರಟೆ, ವಿಮರ್ಶೆ ಮೊದಲಾದವುಗಳನ್ನು ಬರೆದಿದ್ದಾರೆ. ಪುಟ್ಟಪ್ಪನವರು ಕಾದಂಬರಿ, ಜೀವನ ಚರಿತ್ರೆ, ನಾಟಕ ಮೊದಲಾದವುಗಳನ್ನು ಬರೆದಿದ್ದಾರೆ. ಹೀಗೆ ಮಾಸ್ತಿ, ದೇವುಡು, ಅ.ನ.ಕೃ, ತ.ರಾ.ಸು, ಶ್ರೀ ರಂಗ ಮೊದಲಾದವರು ಬೇರೆ ಬೇರೆ ಪ್ರಕಾರಗಳಲ್ಲಿ ಕೆಲಸ ಮಾಡಿದರೂ ಯಾವುದೋ ಒಂದು ವಿಶಿಷ್ಠ ಪ್ರಕಾರದಿಂದ ತಮ್ಮ ಎತ್ತರವನ್ನು ಮುಟ್ಟಿರುವವರು. ಈ ಎಲ್ಲಾ ಲೇಖಕರೊಡನೆ ಹೋಲಿಸಿದಾಗ ಕೂಡ ಕಾರಂತರು ತುಂಬಾ ಎತ್ತರದವರು ಎನಿಸುತ್ತದೆ."[೭] ಎಂದು ಕಾರಂತರ ಕಾದಂಬರಿಯ ಶ್ರೇಷ್ಠತೆಯನ್ನು ಕುರಿತು ಅಭಿಪ್ರಾಯ ಪಟ್ಟಿದ್ದಾರೆ. ಹಾ.ಮಾ. ನಾಯಕ "ಯಾವ ಮಾನದಿಂದ ಅಳೆದರೂ ಕಾರಂತರು ವಿಶ್ವಲೇಖಕರ ಪಟ್ಟಿಯಲ್ಲಿ ಸೇರ ಬಲ್ಲವರು"[೮] ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಹೀಗೆ ಕಾರಂತರು ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಕೊಟ್ಟಿರುವ ಕೊಡುಗೆಯು ಅಪಾರವಾದುದು. ಆದ್ದರಿಂದ ಹಲವಾರು ವಿದ್ವಾಂಸರು ಅವರ ಕೊಡುಗೆಯನ್ನು ಗಮನಿಸಿ ಕಾರಂತರ ಕುರಿತು ತುಂಬು ಅರ್ಥಪೂರ್ಣವಾದ ವಿಚಾರಗಳನ್ನು ವ್ಯಕ್ತ ಪಡಿಸಿರುವರು. ಈ ವಿಚಾರಗಳಿಂದ ಕನ್ನಡ ಕಾದಂಬರಿಯ ಕ್ಷೇತ್ರದಲ್ಲಿ ಕಾರಂತರ ಸ್ಥಾನವೇನು ಎಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಶಿವರಾಮ ಕಾರಂತರು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಮಹತ್ವದ ಕಾದಂಬರಿಕಾರರಾಗಿರುವುದರಿಂದ ಅವರ ಕಾದಂಬರಿಯಲ್ಲಿ ಸಮಾಜದ ವಿಡಂಬನೆ, ನಿಸರ್ಗ, ಮಾನವ ಸಂಬಂಧಗಳು, ಆಧುನೀಕರಣದ ಪ್ರಕ್ರಿಯೆ, ಆದರ್ಶ ಪರತೆ, ಗಂಡು ಹೆಣ್ಣಿನ ಸಂಬಂಧದ ನೆಲೆಗಳಲ್ಲಿ ಗಟ್ಟಿಯಾದ ಜೀವನ ದರ್ಶನವನ್ನು ಅರಳಿಸಲು ಪ್ರಯತ್ನಿಸುತ್ತಾರೆ.

ಇದುವರೆಗೂ ಕಾರಂತರ ಕೆಲವು ಪ್ರಮುಖ ಕಾದಂಬರಿಗಳನ್ನು ಇಟ್ಟುಕೊಂಡು, ಪ್ರಮುಖವಾದ ವಿಷಯವನ್ನು ತೆಗೆದುಕೊಂಡು ಅಧ್ಯಯನ ಮಾಡಲಾಗಿದೆ. ಆದರೆ ಅವರ "ಮರಳಿ ಮಣ್ಣಿಗೆ" ಕಾದಂಬರಿಯನ್ನು ತೆಗೆದುಕೊಂಡು ವ್ಯಾಪಕ ಚರ್ಚೆಗೆ,

ವಿಶ್ಲೇಷಣೆಗೆ ಒಳಪಡಿಸಿ ಅಧ್ಯಯನ ಮಾಡುವುದು ಈ ಪ್ರಬಂಧದ ಮುಖ್ಯ ಗುರಿಯಾಗಿದೆ.

★★★★★★★★

## ಅಡಿ ಟಿಪ್ಪಣಿಗಳು:

೧. ಶಿವರಾಮ ಕಾರಂತ: ಸ್ಮೃತಿ ಪಟಲದಿಂದ ಭಾಗ ೨,
ರಾಜಲಕ್ಷ್ಮಿ ಪ್ರಕಾಶನ,
ಬೆಂಗಳೂರು,
೧೯೭೮, ಪುಟ-೧೫೦.

೨. ಟಿ.ಪಿ. ಅಶೋಕ: (ಸಂ) ಕನ್ನಡ ಸಾಹಿತ್ಯ ಈ ಶತಮಾನದ ನೋಟ,
ಕನ್ನಡ ವಿಶ್ವ ವಿದ್ಯಾಲಯ ಹಂಪಿ,
೧೯೯೩, ಪುಟ-೫.

೩. ಪೂರ್ವೋಕ್ತ: ಪುಟ-೬.

೪. ಎಲ್.ಎಸ್. ಶೇಷಗಿರಿ ರಾವ್: ಹೊಸಗನ್ನಡ ಸಾಹಿತ್ಯ,
೧೯೯೫, ಪುಟ-೧೬೮.

೫. ಕೀರ್ತಿನಾಥ ಕುರ್ತುಕೋಟಿ: ಯುಗಧರ್ಮ ಮತ್ತು ಸಾಹಿತ್ಯ ದರ್ಶನ,
ಮನೋಹರ ಗ್ರಂಥಮಾಲೆ, ಧಾರವಾಡ,
೧೯೯೧, ಪುಟ-೨೮೨.

೬. ಕಾರಂತ ಅರವತ್ತು: ಕಾರಂತ ಸನ್ಮಾನ ಸಮಿತಿ, ಉಡುಪಿ,
೧೯೬೨, ಪುಟ-೯.

೭. ಜಿ.ಎಸ್. ಶಿವರುದ್ರಪ್ಪ: (ಸಂ) ಕಾದಂಬರಿಕಾರರಾಗಿ ಕಾರಂತ, ಪ್ರಸಾರಂಗ,
ಬೆಂಗಳೂರು ವಿಶ್ವ ವಿದ್ಯಾಲಯ,
೧೯೮೩, ಪುಟ-೧.

೮.ಅಭಿನಂದನ: ಅಭಿನಂದನಾಸಮಿತಿ,
ಮಹಾತ್ಮಗಾಂಧಿ ಮೆಮೋರಿಯಲ್‌ಕಾಲೇಜು,
ಉಡುಪಿ,
೧೯೭೦, ಪುಟ-೧೭೫.

## ಅಧ್ಯಾಯ: ೨

## ಆದರ್ಶವಾದಿ ನೆಲೆ ಮತ್ತು ಮರಳಿ ಮಣ್ಣಿಗೆ

ಶಿವರಾಮ ಕಾರಂತರು ಸ್ವಾತಂತ್ರ್ಯ ಪೂರ್ವದಿಂದಲೇ ಕಾದಂಬರಿಗಳನ್ನು ರಚನೆ ಮಾಡಲು ಆರಂಭಿಸಿದವರು. ಈ ಕಾಲ ಹೆಚ್ಚು ಕಡಿಮೆ ಗಾಂಧಿ ಪ್ರಣೀತ ಆದರ್ಶವಾದದ ಪ್ರಭಾವಕೊಳ್ಳಗಾದ ಅಂಶಗಳನ್ನು ಸಮಕಾಲೀನ ಸಂದರ್ಭದ ಸಾಹಿತ್ಯ ಕೃತಿಗಳ ಹಿನ್ನೆಲೆಯಲ್ಲಿ ಗಮನಿಸಿಕೊಳ್ಳಲು ಸಾಧ್ಯವಿದೆ. ಈ ಕಾರಣದಿಂದಲೇ ಕಾರಂತರ ಕಾದಂಬರಿಯು ನನಗೆ ಅತ್ಯಂತ ಕುತೂಹಲವನ್ನುಂಟು ಮಾಡಿದೆ. ಹೀಗಾಗಿ ಲೇಖಕರು ತಮ್ಮ ಕಾದಂಬರಿಗಳಲ್ಲಿ ತಾವು ಆಯ್ಕೆ ಮಾಡಿಕೊಂಡ ವಸ್ತುವನ್ನು ನಿರ್ವಹಿಸುವ ಕ್ರಮದಲ್ಲಿಯೇ ಆದರ್ಶವಾದ ಆಶಯಗಳನ್ನು ಕೇಂದ್ರಬಿಂದುವನ್ನಾಗಿ ಮಾಡಿಕೊಂಡಿರುವ ಹಲವಾರು ಸಂದರ್ಭಗಳನ್ನು ಕಾಣಬಹುದು. ಕಾರಂತರು ವಸಾಹತುಶಾಹಿ ಆಳ್ವಿಕೆಯ ಕಾಲದಲ್ಲಿ ಆಗತಾನೇ ತಮ್ಮ ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಮುಗಿಸಿ ಕುಂದಾಪುರದಲ್ಲಿ ಕಾಲೇಜಿಗೆ ಪ್ರವೇಶ ಪಡೆದುಕೊಳ್ಳುವರು. ಹೆಚ್ಚಿನ ಅಧ್ಯಯನವನ್ನು ಮಾಡಲು ಕುಂದಾಪುರಕ್ಕೆ ಬಂದ ಕಾರಂತರಿಗೆ ಅನೇಕ ರೀತಿಯ ವಿಶಿಷ್ಟ ಅನುಭವಗಳು ಆಗುತ್ತವೆ. ಇಂತಹ ಅನುಭವಗಳಿಗೆ ಪ್ರಮುಖ ಕಾರಣವೆಂದರೆ ಭಾರತವು ಪರಕೀಯರ ಆಳ್ವಿಕೆಯಲ್ಲಿ ಸಿಕ್ಕಿಹಾಕಿಕೊಂಡಿರುವುದು, ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕವಾಗಿ ಶೋಷಣೆಗಳಿಗೆ ಒಳಗಾಗಿರುವುದು. ಅವರ ಆರಂಭದ ದಿನಗಳಲ್ಲಿ ಅಧ್ಯಯನವನ್ನು ತೊರೆದು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಳ್ಳಲು ಕಾರಣವಾದ ಹಲವಾರು ಮಹತ್ವದ ಅಂಶಗಳನ್ನು ತಮ್ಮ ಆತ್ಮಚರಿತ್ರೆಯಾದ **"ಹುಚ್ಚು ಮನಸ್ಸಿನ ಹತ್ತು ಮುಖಗಳು"** ಎಂಬ ಕೃತಿಯಲ್ಲಿ ಪ್ರಸ್ತಾಪಿಸುತ್ತಾರೆ. ಬಹುಶ: ಈ ಸ್ಥಿತಿಯೆ ತಮ್ಮ ಹಲವು ಕಾದಂಬರಿಗಳು ಆದರ್ಶವಾದಿ ಅಂಶಗಳನ್ನು ಮೈಗೂಡಿಸಿಕೊಳ್ಳಲು ಕಾರಣವಾಗಿರಬಹುದು ಎಂದು ನಾನು ಭಾವಿಸುತ್ತೇನೆ.

ಕಾರಂತರು ಸ್ವಾತಂತ್ರ್ಯ ಪೂರ್ವದಲ್ಲಿಯೇ ಹಲವಾರು ಕಾದಂಬರಿಗಳನ್ನು ರಚಿಸಿರುವರು. ಆ ಕಾದಂಬರಿಗಳನ್ನು ಈ ಕೆಳಕಂಡಂತೆ ಗುರುತಿಸಬಹುದಾಗಿದೆ. "ವಿಚಿತ್ರಕೂಟ" (೧೯೨೪) "ಭೂತ" (೧೯೨೫) "ನಿರ್ಭಾಗ್ಯಜನ್ಮ" (೧೯೨೫) "ದೇವದೂತರು" (೧೯೨೮) "ಕನ್ಯಾಬಲಿ" (೧೯೨೬) "ಚೋಮನದುಡಿ" (೧೯೩೩) "ಸರಸಮ್ಮನ ಸಮಾದಿ" (೧೯೩೭) "ಮರಳಿ ಮಣ್ಣಿಗೆ" (೧೯೪೨) "ಬೆಟ್ಟದ ಜೀವ" (೧೯೪೩) "ಹೆತ್ತಳಾತಾಯಿ" (೧೯೪೫)

"ಮುಗಿದ ಯುದ್ಧ" (೧೯೪೫) "ಔದಾರ್ಯದ ಉರುಳಲ್ಲಿ" (೧೯೪೭) ಈ ಕಾದಂಬರಿಗಳು ವಸ್ತುವಿನ ದೃಷ್ಠಿಯಿಂದ ತುಂಬ ವೈವಿಧ್ಯಮಯವಾಗಿ ಕೂಡಿರುವಂತಹವುಗಳಾಗಿವೆ. ಅವರ ಆರಂಭದ ಕಾದಂಬರಿಗಳಾದ ವಿಚಿತ್ರ ಕೂಟ, ಭೂತ ... . . ಇತ್ಯಾದಿಗಳು ಪತ್ತೇದಾರಿ ಕಾದಂಬರಿಗಳಾಗಿವೆ.

ಈ ಕಾದಂಬರಿಗಳು ವೈವಿಧ್ಯಮಯವಾದ ವಸ್ತುಗಳನ್ನು ಹಾಗೆಯೇ ಆ ವಸ್ತುಗಳ ಬೇರೆ ಮುಖಗಳನ್ನು ಕುರಿತು ಚಿತ್ರಿಸುತ್ತವೆ. ಅಂದರೆ ನಿಸರ್ಗ, ಬದುಕಿನ ಚಿತ್ರಣ, ಸ್ತ್ರೀಪಾತ್ರಗಳು, ವೇಶ್ಯೆಯರ ಜೀವನ ಚಿತ್ರಣ, ಆಧುನೀಕರಣದ ವಿಚಾರಗಳು, ಸ್ವಾತಂತ್ರ್ಯ ಚಳುವಳಿ, ಸತ್ಯಾಗ್ರಹ . . . ಹೀಗೆ ಹತ್ತು ಹಲವು ಮುಖಗಳನ್ನು ಕುರಿತು ಸಮಾಜದ ಚಿತ್ರಣವನ್ನು ಸಾಮಾನ್ಯವಾಗಿ ಕಟ್ಟಿಕೊಡುತ್ತವೆ. ಆದ್ದರಿಂದ ಈ ಕಾದಂಬರಿಗಳು ವಸ್ತುವಿನ ದೃಷ್ಟಿಯಿಂದ ವೈವಿಧ್ಯಮಯತೆಯನ್ನು ಪಡೆದುಕೊಂಡಿವೆ ಎಂದು ಭಾವಿಸಬಹುದು. ಈ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಪೂರ್ವದ ಭಾರತದ ಸ್ಥಿತಿಗತಿಗೆ ಸಂಬಂಧಿಸಿದಂತೆ ಮತ್ತು ರಾಷ್ಟ್ರೀಯ ರಾಜಕೀಯವನ್ನು ಕುರಿತಂತೆ, ಮಾನವೀಯ ಆದರ್ಶಗಳನ್ನು ಕುರಿತಂತೆ ಅಧ್ಯಯನ ಮಾಡಲು ಪ್ರಾತಿನಿಧಿಕವಾಗಿ 'ಮರಳಿ ಮಣ್ಣಿಗೆ' ಎಂಬ ಕಾದಂಬರಿಯನ್ನು ಆಯ್ಕೆ ಮಾಡಿಕೊಂಡು ವಿಶ್ಲೇಷಣೆಗೆ ಒಳಪಡಿಸಲು ಪ್ರಯತ್ನಿಸುತ್ತೇನೆ.

'ಮರಳಿ ಮಣ್ಣಿಗೆ' ೧೯೪೨ ರಲ್ಲಿ ರಚನೆಯಾದ ಕಾರಂತರ ಮಹತ್ವಪೂರ್ಣ ಕಾದಂಬರಿ. ಈ ಕಾದಂಬರಿಯಲ್ಲಿ ಮೂರು ತಲೆಮಾರುಗಳ ಜೀವನ ಚಿತ್ರಣವನ್ನು ಮುಖ್ಯವಾಗಿ ಚಿತ್ರಿಸಲಾಗಿದೆ. ಈ ಮೂರು ತಲೆಮಾರುಗಳ ಜೀವನ ಚಿತ್ರಣವು ತನ್ನದೇ ಆದ ರೀತಿಯಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಈ ಕಾದಂಬರಿಯನ್ನು ಕುರಿತ ಮೊದಲ ಮಾತಿನಲ್ಲಿ "ಇದು ಒಂದೇ ತಲೆಮಾರಿನ ಕಥೆಯಲ್ಲ. ಮೂರು ತಲೆಮಾರುಗಳ ಕಥೆ. ೧೮೫೦ರ ಸುಮಾರಿಗೆ ತೊಡಗುವ ಈ ಕಥೆಯು ೧೯೪೦ ರಲ್ಲಿ ಮುಗಿಯುತ್ತದೆ. ತನ್ನ ಊರಿನ ಬಡತನದ ಬಾಳ್ವೆಯೇ ಕಥೆಯ ವಸ್ತುವಾಗಿದೆ. ಈ ಬಾಳ್ವೆಯ ಪ್ರಶ್ನೆ ಮೂರು ತಲೆಮಾರುಗಳಲ್ಲಿ ಹೇಗೆ ಪ್ರತ್ಯುತ್ತರಗೊಳ್ಳುತ್ತದೆ ಎಂಬುದು ಇದರಲ್ಲಿ ಚಿತ್ರಿಸಲ್ಪಟ್ಟಿದೆ"೧ ಎಂದು ಲೇಖಕರೆ ತಮ್ಮ ಕಾದಂಬರಿ ವಸ್ತುವನ್ನು ಕುರಿತು ಪ್ರಸ್ತಾಪಿಸುತ್ತಾರೆ.

ಈ ಕಾದಂಬರಿಯ ಮೂರು ತಲೆಮಾರುಗಳ ಜೀವನ ಚಿತ್ರಣವೆಂದರೆ ಮೊದಲ ತಲೆಮಾರಿನಲ್ಲಿ ರಾಮೈತಾಳ, ಪಾರೋತಿ, ಸರಸೋತಿ, ಶೀನಮಯ್ಯ . . . ಇತ್ಯಾದಿ ಪಾತ್ರಗಳ ಚಿತ್ರಣ ಪ್ರಮುಖವಾಗಿ ಕಂಡುಬರುತ್ತವೆ. ಎರಡನೇ ತಲೆಮಾರಿನಲ್ಲಿ ರಾಮೈತಾಳನ ಮಗ ಲಚ್ಚ ಮತ್ತು ಶೀನಮಯ್ಯನ ಮಕ್ಕಳು, ಲಚ್ಚ ಮತ್ತು ನಾಗವೇಣಿಯ ದಾಂಪತ್ಯ ಜೀವನ ಇತ್ಯಾದಿಗಳು

ಪ್ರಮುಖವಾಗಿ ಕಂಡುಬರುತ್ತವೆ. ಮೂರನೇ ತಲೆಮಾರಿನಲ್ಲಿ ಲಚ್ಚ ಮತ್ತು ನಾಗವೇಣಿಯ ಮಗ ರಾಮನ ಪಾತ್ರ ಚಿತ್ರಣವು ಪ್ರಮುಖವಾಗಿ ಕಂಡುಬರುತ್ತದೆ.

"ಮರಳಿ ಮಣ್ಣಿಗೆ" ಕಾದಂಬರಿ ಸ್ವಾತಂತ್ರ್ಯಪೂರ್ವ ಭಾರತದ ರಾಷ್ಟ್ರೀಯ ರಾಜಕೀಯ ಚಿತ್ರಣವನ್ನು ಕುರಿತಂತೆ ತುಂಬಾ ಪ್ರಮುಖವಾದುದು. ಮೂರನೇ ತಲೆಮಾರಿನಲ್ಲಿ ಚಿತ್ರಣವಾಗಿರುವ ರಾಮನ ಪಾತ್ರದಲ್ಲಿ ರಾಷ್ಟ್ರೀಯ ರಾಜಕೀಯ ನೆಲೆಗಳನ್ನು ಪ್ರಮುಖವಾಗಿ ಗುರುತಿಸಬಹುದು. ರಾಮ ತನ್ನ ಹಳ್ಳಿಯಿಂದ ಮದ್ರಾಸಿಗೆ ಬಿ.ಎ. ಪದವಿಯನ್ನು ಓದಲು ಹೋಗುವನು. ಈ ಸಮಯಕ್ಕಾಗಲೇ ಪರಕೀಯರಿಂದ ಶೋಷಣೆಗೆ ಒಳಗಾಗುತ್ತಿದ್ದ ಭಾರತೀಯರು ಪರಕೀಯರ ರಾಜಕೀಯ ಆಡಳಿತ ವ್ಯವಸ್ಥೆಯನ್ನು ಕುರಿತಂತೆ ಅನೇಕ ರೀತಿಯಲ್ಲಿ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಿರುವ ಸಂದರ್ಭಗಳು ಕಾದಂಬರಿಯಲ್ಲಿ ಪ್ರಕಟವಾಗಿವೆ. ರಾಮನು ಕೂಡ ತಾನು ಬಿ.ಎ. ಪದವಿಯನ್ನು ಓದುವ ಸಮಯದಲ್ಲಿ ರಾಷ್ಟ್ರದ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಳ್ಳುತ್ತಾನೆ, ಆ ಮೂಲಕ ವಿದ್ಯಾಭ್ಯಾಸವನ್ನು ತೊರೆಯುತ್ತಾನೆ, ಇದು ಅವನಲ್ಲಿನ ರಾಷ್ಟ್ರಪ್ರೇಮವನ್ನು ಮತ್ತು ದೇಶಭಕ್ತಿಯನ್ನು ಸೂಚಿಸುತ್ತದೆ. ಸ್ವಾತಂತ್ರ್ಯೋತ್ತರ ರಾಜಕೀಯ ಎನ್ನುವ ಪದವು ಅನೇಕ ನೆಲೆಗಳಲ್ಲಿ ಪ್ರಮುಖ ಅರ್ಥವನ್ನು ಪಡೆದುಕೊಂಡರೂ ಸ್ವಾತಂತ್ರ್ಯ ಪೂರ್ವದಲ್ಲಿ ರಾಷ್ಟ್ರದ ಸ್ವಾತಂತ್ರಕ್ಕೋಸ್ಕರ ಪರಕೀಯರ ಆಡಳಿತದ ವಿರುದ್ಧ ಚಳುವಳಿ ಸತ್ಯಾಗ್ರಹ, ವಿದೇಶಿ ವಸ್ತುಗಳ ಬಹಿಷ್ಕಾರ ಮುಂತಾದ ಕಾರ್ಯಗಳಲ್ಲಿ ಭಾಗವಹಿಸುವಿಕೆ ಕೂಡ ಒಂದು ರೀತಿಯಲ್ಲಿ ರಾಷ್ಟ್ರದ ರಾಜಕೀಯ ಸ್ವಾತಂತ್ರ್ಯ ಪ್ರೇಮವನ್ನು ಮತ್ತು ಆತನ ಆದರ್ಶತೆಯನ್ನು ವ್ಯಕ್ತಪಡಿಸುತ್ತದೆ. ನಮ್ಮದೇ ಆದ ರಾಜಕೀಯ ವ್ಯವಸ್ಥೆಯನ್ನು ಸ್ಥಾಪನೆ ಮಾಡಿಕೊಂಡು ಆಡಳಿತ ಮಾಡುವಂತಾಗಬೇಕೆಂಬ ಹಂಬಲ ಅವನ ಚಿಂತನೆಯಲ್ಲಿ ತುಂಬ ಪ್ರಮುಖವಾದದ್ದು.

ಭಾರತಕ್ಕೆ ವ್ಯಾಪಾರಕ್ಕೆಂದು ಬಂದ ಬ್ರಿಟೀಷರು ಕಾಲಕ್ರಮೇಣ ಭಾರತದ ಬಹುತೇಕ ಭಾಗವನ್ನು ಆಕ್ರಮಣ ಮಾಡಿಕೊಂಡು ಆ ಮೂಲಕ ತಮ್ಮ ರಾಜಕೀಯ ಅಧಿಪತ್ಯವನ್ನು ಸ್ಥಾಪಿಸಿಕೊಂಡು ಆಳ್ವಿಕೆಯನ್ನು ಮಾಡಲು ತೊಡಗುವರು. ಈ ಹಿನ್ನೆಲೆಯಲ್ಲಿಯೇ ಅಂದಿನ ಭಾರತದ ಸಾಮಾಜಿಕ, ರಾಜಕೀಯ ವ್ಯವಸ್ಥೆಯು ಪರಕೀಯರಲ್ಲಿ ಕೇಂದ್ರೀಕೃತವಾಗುವುದು, ಆ ಮೂಲಕ ಭಾರತೀಯರನ್ನು ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಬ್ರಿಟೀಷರು ಶೋಷಣೆಗೆ ಗುರಿಮಾಡುವರು. ಆದ್ದರಿಂದ ಅಂತಹ ಸಮಯದಲ್ಲಿ ಬ್ರಿಟೀಷರನ್ನು ಇಲ್ಲಿಂದ ಹೊರದೂಡಬೇಕಾದರೆ ರಾಮನಂತಹ ವಿದ್ಯಾವಂತ ವರ್ಗವು ಎಚ್ಚೆತ್ತುಕೊಂಡು ಹೋರಾಟ ಮಾಡುವುದು ತುಂಬಾ ಅನಿವಾರ್ಯವಾಗಿತ್ತು.

ಬ್ರಿಟೀಷರನ್ನು ಇಲ್ಲಿಂದ ತೊಲಗಿಸಬೇಕಾದರೆ ಸ್ವಾತಂತ್ರ್ಯ ಚಳುವಳಿ ಮತ್ತು ಜನಪರ ಹೋರಾಟಗಳು ಅತ್ಯಗತ್ಯವಾಗಿದ್ದವು. ಆ ಮೂಲಕ ನಮ್ಮದೇ ಆದ ರಾಜಕೀಯ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಪಡೆದುಕೊಳ್ಳುವುದು ತುಂಬಾ ಅನಿವಾರ್ಯ ಮತ್ತು ಅಗತ್ಯವಾಗಿತ್ತು. ಅದನ್ನು ಪಡೆಯಬೇಕಾದರೆ ಬ್ರಿಟೀಷರ ವಿರುದ್ಧ ಹೋರಾಡಿ ಅವರನ್ನು ಸೋಲಿಸುವ ಮೂಲಕ ಅಥವಾ ಇಲ್ಲಿಂದ ಹೊರದೂಡುವ ಮೂಲಕ ಸ್ವಾತಂತ್ರ್ಯವನ್ನು ರಾಜಕೀಯವಾಗಿ ಪಡೆದುಕೊಳ್ಳುವುದು ಭಾರತೀಯರಿಗೆ ಅತ್ಯಗತ್ಯವಾಗಿತ್ತು. ಈ ದೃಷ್ಟಿಯಿಂದ ಅನೇಕ ಸ್ವಾತಂತ್ರ್ಯ ಚಳುವಳಿಗಳಲ್ಲಿ ರಾಮ ತನ್ನನ್ನು ತಾನು ತೊಡಗಿಸಿಕೊಳ್ಳುವನು ಮತ್ತು ತನ್ನ ವಿದ್ಯಾಭ್ಯಾಸಕ್ಕೆ ತಿಲಾಂಜಲಿಯನ್ನು ಇಡುವನು. ಆ ಮೂಲಕ ರಾಷ್ಟ್ರಪ್ರೇಮವನ್ನು ಹೊಂದಿದ್ದಂತಹ ಒಬ್ಬ ಆದರ್ಶ ನಾಯಕನಂತೆಯೂ ಕಾಣಿಸಿಕೊಂಡಿರುವುದನ್ನು ಕಾಣುತ್ತೇವೆ.

ರಾಮ ತಾನು ವಿದ್ಯಾಭ್ಯಾಸ ಮಾಡುವ ಸಮಯದಲ್ಲಿ ಹಲವಾರು ವಿದ್ಯಾರ್ಥಿಗಳು ಚಳುವಳಿಗಳಲ್ಲಿ ಪಾಲ್ಗೊಂಡು ಜೈಲಿಗೆ ಹೋಗುವುದಕ್ಕಿಂತ ಮುಖ್ಯವಾಗಿ ತಮ್ಮ ವಿದ್ಯಾಭ್ಯಾಸದ ಕಡೆಯೇ ಹೆಚ್ಚಿನ ಗಮನವನ್ನು ಕೇಂದ್ರೀಕರಿಸುತ್ತಿದ್ದರು. ಮತ್ತು ಆ ಮೂಲಕ ತಮ್ಮ ಅಧ್ಯಯನದ ಕಡೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತಿದ್ದರು. ಸಮಾಜದಲ್ಲಿ ಯಾವುದಾದರೊಂದು ಪ್ರತಿಷ್ಠಿತ ಹುದ್ದೆಯನ್ನು ಪಡೆದುಕೊಂಡು ತಮ್ಮ ವೈಯಕ್ತಿಕ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುತ್ತಿದ್ದರು. ಆದರೆ ರಾಮ ಮಾತ್ರ ಯಾವುದೇ ಸಂದರ್ಭದಲ್ಲಿಯೂ ತನ್ನ ವೈಯಕ್ತಿಕ ಆಸೆ ಆಕಾಂಕ್ಷೆಗಳಿಗೆ ಪ್ರಾಮುಖ್ಯತೆಯನ್ನು ಕೊಡದೆ ರಾಷ್ಟ್ರವು ಪರಕೀಯರ ಆಳ್ವಿಕೆ ದಾಸ್ಯದ ಸಂಕೋಲೆಗೆ ಒಳಗಾಗಿರುವುದನ್ನು ಕುರಿತು ಚಿಂತಿಸಿ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ನಿರ್ಧಾರವನ್ನು ತಳೆಯುವನು. ಇಂತಹ ಆದರ್ಶವನ್ನು ಮೈಗೂಡಿಸಿಕೊಂಡಿರುವ ರಾಮ ಪ್ರಸ್ತುತ ಸಮಾಜಕ್ಕೆ ಆದರ್ಶಪ್ರಾಯ. ಅದೇ ರೀತಿ ಮಹಾತ್ಮ ಗಾಂಧೀಜಿಯವರ ಪ್ರಭಾವವನ್ನು ಸಹ ರಾಮನ ಮೇಲೆ ಹೆಚ್ಚು ಆಗಿರುವುದನ್ನು ಮುಖ್ಯವಾಗಿ ಗಮನಿಸಬಹುದು.

ರಾಮನು ಮದ್ರಾಸಿನಲ್ಲಿ ಬಿ.ಎ. ಅಂತಿಮ ವರ್ಷದಲ್ಲಿ ಓದುತ್ತಿರುವಾಗ ನಡೆಯುವ ಈ ಘಟನೆಯಿಂದ ಅವನಲ್ಲಿನ ಸ್ವಾತಂತ್ರ್ಯ ಅಪೇಕ್ಷೆಯು ಎಷ್ಟು ಗಾಢವಾಗಿ ನೆಲೆಯೂರಿತ್ತು ಎಂಬುದನ್ನು ಈ ಸಂದರ್ಭದಿಂದ ಗುರುತಿಸಬಹುದಾಗಿದೆ. ರಾಮ ಮದ್ರಾಸಿನಲ್ಲಿ ಬಿ.ಎ. ಕೊನೆಯ ವರ್ಷವನ್ನು ಓದುತ್ತಿರುವನು. ಆಗ ಅವನಿಗೆ ರಜೆಯು ಬಂದಿದೆ ಅಂತಹ ಸಮಯದಲ್ಲಿ ತನ್ನ ಗೆಳೆಯರ ಮನೆಗಳಿಗೆ ಹೋಗಿ ಅಲ್ಲಿ ತನ್ನ ಅಧ್ಯಯನವನ್ನು ಮಾಡಿಕೊಳ್ಳುತ್ತಾನೆ

ರಾಮ ತನ್ನಲ್ಲಿ ಇಲ್ಲದಿರುವ ಪುಸ್ತಕಗಳನ್ನು ತನ್ನ ಗೆಳೆಯರಿಂದ ಪಡೆದುಕೊಂಡು ಓದುತ್ತಾನೆ. ಒಮ್ಮೆ ರಾಜಮಣಿ ಅಯ್ಯರ್ ಮನೆಗೆ ಹೋಗಿದ್ದ. ರಾಜಮಣಿಯು ಆಗತಾನೆ ಮುದ್ರಣವಾಗಿದ್ದ ಸಂಡರ್ ಲೇಂಡರ್‌ನ **"India Bandage"** ಎಂಬ ಪುಸ್ತಕವನ್ನು ತಂದು ಓದುತ್ತಿದ್ದನು. ತುಂಬ ದೊಡ್ಡದಾದ ಗ್ರಂಥವನ್ನು ಕಂಡು ರಾಮ ರಾಜಮಣಿಯನ್ನು ಆ ಪುಸ್ತಕದ ವೈಶಿಷ್ಟ್ಯತೆ ಕುರಿತು ಕೇಳುವನು. ಆಗ ರಾಜಮಣಿಯು ಆ ಪುಸ್ತಕವನ್ನು ಅದೇ ರಾತ್ರಿಯಲ್ಲಿ ಓದಿ ಮುಗಿಸಿಕೊಡಬೇಕೆಂದು ಹೇಳಿದಾಗ ರಾಮ ಅಂದು ಇಡೀ ರಾತ್ರಿಯಲ್ಲಿ ಆ ಪುಸ್ತಕವನ್ನು ಓದುವನು. ಆಗ ರಾಮನಿಗೂ ಆ ಪುಸ್ತಕ ಕುರಿತು ಕುತೂಹಲ ಉಂಟಾಗಿ ತನಗೂ ಆ ಪುಸ್ತಕವನ್ನು ಓದಲೇಬೇಕು ಎನ್ನುವ ಆಸಕ್ತಿಯು ಉಂಟಾಗುತ್ತದೆ. ಪುಸ್ತಕವನ್ನು ಕೈಗೆ ತೆಗೆದುಕೊಂಡು ನೋಡಿದ.

ಆದರೆ ರಾಜಮಣಿಯು ಅಷ್ಟು ಸುಲಭವಾಗಿ ರಾಮನಿಗೆ ಆ ಪುಸ್ತಕವನ್ನು ಕೊಡಲು ಸಿದ್ಧನಿರುವುದಿಲ್ಲ. ಏಕೆಂದರೆ ಅದೊಂದು ಬಹಿಷ್ಕೃತ ಪುಸ್ತಕ. ಸರಕಾರದವರು ಆ ಪುಸ್ತಕವನ್ನು ಏನಾದರೂ ಕಂಡರೆ ನಿನ್ನನ್ನು ಸೆರೆಮನೆಗೆ ತಳ್ಳುವರು. ಆಗ ನಿನ್ನ ಬಿ.ಎ. ಪದವಿ ಎಲ್ಲೂರಲ್ಲೋ ಅಥವಾ ಕಡಲೂರಲ್ಲೋ ಆಗಬೇಕಾಗುತ್ತದೆ ಎಂದು ಗಂಭೀರವಾಗಿ ರಾಮನಿಗೆ ಎಚ್ಚರಿಕೆಯನ್ನು ಕೊಡುತ್ತಾನೆ. ಆಗ ರಾಮನಿಗೆ ಆ ಪುಸ್ತಕದ ಬಗ್ಗೆ ಮತ್ತಷ್ಟು ಕುತೂಹಲ, ಆಸಕ್ತಿ ಉಂಟಾಗುತ್ತದೆ. ಆದ್ದರಿಂದ ಹೇಗಾದರೂ ಸರಿಯೇ ಆ ಪುಸ್ತಕವನ್ನು ಓದಲೇಬೇಕು ಎನ್ನುವ ದೃಢವಾದ ತೀರ್ಮಾನವನ್ನು ಮಾಡಿಕೊಳ್ಳುತ್ತಾನೆ. ಕೊನೆಗೆ ರಾಜಮಣಿಯಿಂದ ತೆಗೆದುಕೊಂಡ ಆ ಪುಸ್ತಕವನ್ನು ಇಡೀ ರಾತ್ರಿಯೆಲ್ಲಾ ಬೆಳಕು ಆಗುವವರೆಗೂ ಓದಿ ಕೊನೆಗೆ ರಾಜಮಣಿಗೆ ಪುಸ್ತಕವನ್ನು ಹಿಂದಿರುಗಿಸುತ್ತಾನೆ.

ರಾಜಮಣಿಯು ಪುಸ್ತಕದ ವಸ್ತುವನ್ನು ಕುರಿತು ರಾಮನಿಗೆ ಹೇಗಿದೆ ಪುಸ್ತಕ ಎಂದು ಕೇಳಿದಾಗ ಹೊರಗಿನ ವ್ಯಕ್ತಿಯೊಬ್ಬರು ನಮ್ಮ ದೇಶದ ಬಂಧನವನ್ನು ಕುರಿತು ಅಷ್ಟೊಂದು ದು:ಖಪಟ್ಟರೆ ನಮಗೆ ಮಾತ್ರ ಆ ಬಂಧನದ ಅರಿವು ಆಗದೇ ಇರುವುದು ಶೋಚನೀಯ ಎಂದು ಹೇಳುವನು. ಅಂದಿನಿಂದ ರಾಮನಿಗೆ ತನ್ನ ಬಿ..ಎ. ಓದಿನ ಜೊತೆಗೆ ಪರಕೀಯರ ಬಂಧನದಲ್ಲಿ ದೇಶ ಇರುವ ಬಗ್ಗೆಯೂ ಚಿಂತೆಯುಂಟಾಗುತ್ತದೆ. ಇಂದಿನ ಸಮಾಜವು ತಮ್ಮ ವೈಯಕ್ತಿಕ ಕೆಲಸಕಾರ್ಯಗಳಿಗೆ ಹೆಚ್ಚು ಒತ್ತು ಕೊಟ್ಟು ಇಡೀ ದೇಶವನ್ನು ಮರೆಯುವ ಹಂತಕ್ಕೆ ತಲುಪುತ್ತಿರುವ ಸಂದರ್ಭದಲ್ಲಿ ರಾಮನ ದೇಶಚಿಂತನೆ ನಿಜವಾಗಲು ಮಾರ್ಗದರ್ಶಿಯಾಗುವುದು ಎಂಬುದರಲ್ಲಿ ಸಂಶಯವಿಲ್ಲ.

ಆ ಸಮಯಕ್ಕಾಗಲೇ ರಾಷ್ಟ್ರೀಯ ಚಳುವಳಿ ದೇಶದಾದ್ಯಂತ ನಡೆಯುತ್ತಿತ್ತು. ರಾಮನಿಗೆ ಮಾತ್ರ ೧೯೨೧ ರಲ್ಲಿ ತಾನು ಬಾಲಕನಾಗಿದ್ದಾಗ ಆ ಚಳುವಳಿಯಲ್ಲಿ ಭಾಗವಹಿಸಿದ ನೆನಪು ಮತ್ತೊಮ್ಮೆ ಮರುಕಳಿಸಿ, ಈಗ ತಾನು ತರುಣನಾಗಿದ್ದರೂ, ನಾಡಿನ ಪಾಲಿಗೆ ಕುರುಡನಾಗಿದ್ದೀನಲ್ಲ ಎನ್ನುವ ಯೋಚನೆಯು ತಲೆಯಲ್ಲಿ ತುಂಬಿಕೊಂಡು ರಾಷ್ಟ್ರಭಕ್ತಿಯು ಹೆಚ್ಚಾಗುತ್ತದೆ. ಆಗ ಅವನು ಮದ್ರಾಸಿನ ತಿರುವಲ್ಲಿಕೇಣಿಯ ಕಡಲ ತೀರದಲ್ಲಿ ಪ್ರತಿನಿತ್ಯ ಜನರು ಸೇರಿ ಬ್ರಿಟೀಷ್ ಸರಕಾರವನ್ನು "ಇಂಕ್ವಿಲಾಬ್ ಜಿಂದಾಬಾದ್" ನಿಂದ ಸುಡುತ್ತೇವೆ ಎಂಬ ಘೋಷಣೆಗಳನ್ನು ಕೂಗುತ್ತಿರುವರು. ಅಷ್ಟೊತ್ತಿಗಾಗಲೇ ದೇಶಭಕ್ತಿಯ ಸೆಳೆತಕ್ಕೆ ಒಳಗಾಗಿದ್ದ ರಾಮನು ಅಲ್ಲಿಗೆ ಹೋಗಿ ಸತ್ಯ ಮೂರ್ತಿ ಪ್ರಕಾಶ ಮೊದಲಾದ ದೇಶಭಕ್ತರ ಉಪನ್ಯಾಸಗಳನ್ನು ಕೇಳಿ ತಾನು ಮಾರುಹೋಗುತ್ತಾನೆ.

ಆ ಸಮಯಕ್ಕಾಗಲೇ ಮಹಾತ್ಮಗಾಂಧೀಜಿಯವರು ತಮ್ಮ ಪ್ರಯಾಣವನ್ನು ಸಾಬರಮತಿಯ ಕಡೆಗೆ ಕೈಗೊಳ್ಳುವರು. ಸಾಬರಮತಿಯು ಆಗ ಭಾರತದ ಪಾಲಿಗೆ ದೆಹಲಿ ಆಗುತ್ತದೆ. ಮಹಾತ್ಮಗಾಂಧಿಯವರ ಹಿಂದೆ ಸಾವಿರಾರು ಲಕ್ಷಾಂತರ ಜನರು ಸತ್ಯಾಗ್ರಹದ ಸಮರಕ್ಕೆ ಕಾಲಿರಿಸುವರು. ಆಗ ಅಹಿಂಸೆ, ಮಂತ್ರ ಜಪಿಸುವರು ಕಡಲಿನಿಂದ ನೀರನ್ನು ತುಂಬಿಸಿ ತಂದು ಉಪ್ಪನ್ನು ಮಾಡತೊಡಗುವರು. ಉಪ್ಪಿನ ಸತ್ಯಾಗ್ರಹದಿಂದ ಕೇವಲ ಆರೇ ದಿನಗಳಲ್ಲಿ ಸ್ವರಾಜ್ಯ ಬರುತ್ತಿದೆ ಎಂದು ರಾಜಮಣಿಯು ವಾದಿಸುವನು. ಆಗ ರಾಮನು ಕೂಡ ಭಾರತದಾದ್ಯಂತ ಉಪ್ಪಿನ ಸತ್ಯಾಗ್ರಹ ಮಾಡುವುದರಿಂದ ಶೀಘ್ರವಾಗಿಯೇ ಸ್ವಾತಂತ್ರ್ಯ ಸಿಗುತ್ತದೆ ಎನ್ನುವ ತೀರ್ಮಾನಕ್ಕೆ ಬರುವನು.

ಪ್ರತಿನಿತ್ಯ ಕಾಲೇಜಿನಲ್ಲಿ ಉಪನ್ಯಾಸಗಳನ್ನು ಮುಗಿಸಿಕೊಂಡು ಅಲ್ಲಿಂದ ನೇರವಾಗಿ ಅವನು ಕಡಲದಂಡೆಗೆ ಬರುತ್ತಾನೆ. ರಾಜಮಣಿಯಂತೆ ಭಯಗೊಂಡು ಕತ್ತಲಾದ ಮೇಲೆ ಅಲ್ಲಿನ ಸಭೆಗಳಿಗೆ ಭಯದಿಂದ ಹೋಗುವುದಿಲ್ಲ. ಮನೆಗೆ ಬಂದ ನಂತರ ರಾಜಮಣಿಯನ್ನು ಕುರಿತು ನಮ್ಮ ದೇಶ ಸ್ವತಂತ್ರವಾಗಬೇಕು ಎಂದು ಹೇಳುವನು. ಸ್ವಾತಂತ್ರ್ಯದ ಬಗ್ಗೆ ಉಪನ್ಯಾಸಗಳನ್ನು ಕದ್ದು ಕೇಳಬೇಕೆ? ಎಂದು ಪ್ರಶ್ನಿಸುವನು. ಸಂಡರ್ ಲೇಂಡ್ ನಂಥೆ ವಿದೇಶಿ ವ್ಯಕ್ತಿಗಿರುವಷ್ಟು ಅಭಿಮಾನ ಇಲ್ಲಿನ ಮಕ್ಕಳಿಗೆ ಬರಬಾರದೇ ಎಂದು ಕೇಳುವನು. ಆಗ ರಾಜಮಣಿಯು ರಾಮನನ್ನು ಕುರಿತು ನೀನು ಸ್ವತಂತ್ರ, ತಾಯಿಯ ಮೇಲೆ ನಿನ್ನ ಯಜಮಾನಿಕೆ ನಡೆಯುತ್ತದೆ.

ಆದರೆ ತನಗೆ ಪರೀಕ್ಷೆಯ ಶುಲ್ಕವನ್ನು ಕಟ್ಟಬೇಕಾದರೂ ಆ ಹಣವು ತಂದೆಯಿಂದ ಬರಬೇಕು ಮತ್ತು ಮನೆಯಲ್ಲಿ ತನ್ನನ್ನು ನಂಬಿರುವ ಹೆಂಡತಿ, ಮಕ್ಕಳು ಇರುವರು. ಆದ್ದರಿಂದ ಮುಂದಿನ ಭವಿಷ್ಯಕ್ಕೆ ತೊಂದರೆ ಬಾರದಂತೆ ಇರಲಿ ಎನ್ನುವ ಉದ್ದೇಶದಿಂದ ಎಂದು ತನ್ನ ಸ್ಥಿತಿಯನ್ನು ರಾಮನಿಗೆ ರಾಜಮಣಿಯು ತಿಳಿಸಿಕೊಡುತ್ತಾನೆ.

ಮಾರನೆಯ ದಿನ ಕಾಲೇಜಿನ ಅಧಿಕಾರಿಗಳು ಮತ್ತು ಉಪನ್ಯಾಸಕರು ವಿದ್ಯಾರ್ಥಿಗಳನ್ನು ಕರೆದು ಎಚ್ಚರಿಕೆಯನ್ನು ನೀಡುವರು. ರಾಜಕೀಯ ಗದ್ದಲ ನಿಮ್ಮ ವಿದ್ಯಾಭ್ಯಾಸ ಮುಗಿದ ಮೇಲೆ, ಈಗ ಅಲ್ಲ, ನಿಮ್ಮ ಕಾಲಿನ ಮೇಲೆ ನೀವು ನಿಂತ ಮೇಲೆ ಎಂದು ಹೇಳುವರು. ಹಿರಿಯರು ನಿಮ್ಮನ್ನು ವಿದ್ಯಾಭ್ಯಾಸಕ್ಕೆಂದು ಕಳುಹಿಸಿರುವಾಗ ನೀವು ಅದರ ಕಡೆಗೆ ಗಮನ ಹರಿಸಬೇಕು. ಇನ್ನು ಮುಂದೆ ಸತ್ಯಾಗ್ರಹದ ಸಭೆಗಳಲ್ಲಿ ಯಾರು ಕಾಣಿಸಿಕೊಳ್ಳುತ್ತಾರೋ ಅವರು ಪರೀಕ್ಷೆಯ ಯೋಚನೆಯನ್ನು ಬಿಡಬೇಕಾಗುತ್ತದೆ. ಎಂಬ ಎಚ್ಚರಿಕೆಯನ್ನು ನೀಡುವರು. ಆ ದಿನದಿಂದಲೇ ರಾಜಮಣಿಯು 'ಹಿಂದು' ಪತ್ರಿಕೆಯನ್ನು ಕೊಂಡು ಓದುವುದನ್ನೇ ಬಿಟ್ಟುಬಿಡುತ್ತಾನೆ.

ರಾಮನ ದೇಶಪ್ರೇಮವನ್ನು ಈ ಸಂದರ್ಭದಿಂದ ಗುರುತಿಸಬಹುದಾಗಿದೆ "ಅವನಿಂದ ಆವೇಶಗೊಂಡಂತಹ ರಾಮ ಮಾತ್ರ ಈ ಮಾತಿನಿಂದ ತಗ್ಗಲಿಲ್ಲ. ಅಧ್ಯಾಪಕರುಗಳ ಮಾತುಗಳು ಅವನನ್ನು ಮತ್ತಷ್ಟು ಕೆರಳಿಸಿದವು. ಕಾಲೇಜಿನ ಹೊರಗೆ ನಾವೇನು ಮಾಡಿದರೇನು? ನಮ್ಮ ಆತ್ಮವು ಅವರಿಗೆ ಮಾರಿಹೋಗಿದೆಯೇ? ಎಂದು ಹೇಳಿಕೊಂಡನು. ಮೂರು ದಿನಗಳ ಬಳಿಕ ಅವನ ಮೆಚ್ಚುಗೆಯ ಪ್ರೊಫೆಸರ್ ಸಾಹೇಬರೇ ಅವನನ್ನು ಬಳಿಗೆ ಕರೆದರು. ನಿನ್ನಂತಹ ಬುದ್ಧಿವಂತ ವಿದ್ಯಾರ್ಥಿ ಈ ರಾಜಕೀಯ ಭ್ರಮೆಗೆ ಬೀಳುವುದು ನನಗೆ ಆಶ್ಚರ್ಯವೆನಿಸುತ್ತದೆ ಎಂದಾದರೂ ಉಪ್ಪು ಮಾಡಿ ಸ್ವರಾಜ್ಯ ಸಿಕ್ಕೀತೆ! ತಮ್ಮ ಉಪ್ಪನ್ನು ತಾವು ಮಾಡುತ್ತಿರುವ ಎಷ್ಟು ರಾಜ್ಯಗಳು ಇನ್ನೂ ದಾಸ್ಯದಲ್ಲಿಲ್ಲ! . . . ಹುಚ್ಚನಂತೆ ಈ ವಯಸ್ಸು ಅನುಕೂಲತೆಗಳನ್ನು ಕೆಡಿಸಿಕೊಳ್ಳಬೇಡ, ಮುಂದೆ ನೀನು ಬೆಳೆದಾಗ ನಿನ್ನ ಸ್ವಂತ ಅನುಭವ ಹೇಳಿದರೆ ಬೇಕಾದಂತೆ ಮಾಡು, ಅಂದು ಬರಿಯ ಆವೇಶ"೨ ಹೀಗೆ ರಾಮನು ಸಂಡರ್ ಲೇಂಡರ್ ರವರ **"India Bandage"** ಎನ್ನುವ ಪುಸ್ತಕವನ್ನು ಓದಿ ಆ ಮೂಲಕ ಪರಕೀಯರ ದಾಸ್ಯದಲ್ಲಿರುವ ಭಾರತದ ಸ್ವಾತಂತ್ರ್ಯವನ್ನು ಕುರಿತು ಅನೇಕ ರೀತಿಯಲ್ಲಿ ವಿಚಾರಗಳನ್ನು ಮಾಡುವನು. ಆ ಮೂಲಕ ತನ್ನ ಸ್ವಾತಂತ್ರ್ಯ ಅಪೇಕ್ಷೆಯನ್ನು ವ್ಯಕ್ತಪಡಿಸುವನು ಎಂದು ಹೇಳಬಹುದು.

ರಾಮನು ಬಿ.ಎ. ಪರೀಕ್ಷೆಯನ್ನು ಮುಗಿಸುವ ಕೊನೆಯ ಹಂತದಲ್ಲಿ ಸ್ವಾತಂತ್ರ್ಯ ಚಳುವಳಿಗೆ ಮತ್ತೊಮ್ಮೆ ಮಾರುಹೋಗುವನು. ರಾಮನ ಈ ವಿಚಾರಗಳನ್ನು ತನ್ನ ಚಿಕ್ಕಮ್ಮಳಾದ ಕೃಷ್ಣವೇಣಿಗೆ ತಿಳಿದು ಆಕೆ ಬೇಸರಪಟ್ಟುಕೊಳ್ಳುವಳು. ರಾಮ ತನ್ನ ಬಿ.ಎ. ಮುಗಿಸುವುದು ಅವನ ಜವಾಬ್ದಾರಿಯಾಗುವುದು. ಅಂತಹ ಸಮಯದಲ್ಲಿ ರಾಮನ ತಾಯಿಯಾದ ನಾಗವೇಣಿಗೆ ರಾಮನ ವಿದ್ಯಾಭ್ಯಾಸವನ್ನು ಕುರಿತು ಏನೆಂದು ಪತ್ರ ಬರೆಯುವುದೆಂದು ತೋಚುವುದಿಲ್ಲ.

ಕೃಷ್ಣವೇಣಿಗೆ ರಾಮನ ಚಟುವಟಿಕೆಗಳನ್ನು ಕಂಡು ಗಾಬರಿಯಾಗುತ್ತದೆ. ಏಕೆಂದರೆ ರಾಮನ ಈ ಚಟುವಟಿಕೆಗಳಿಗೆ ಕೃಷ್ಣವೇಣಿಯು ಹತ್ತಿರದಲ್ಲಿದ್ದುಕೊಂಡು ಕಡಿವಾಣ ಹಾಕಲಿಲ್ಲವಲ್ಲ ಎನ್ನುವ ಚಿಂತೆಯು ರಾಮನ ತಾಯಿಗೆ ಬರುತ್ತದೆ ಎನ್ನುವ ರೀತಿಯಲ್ಲಿ ಕೃಷ್ಣವೇಣಿಯು ಪತ್ರಬರೆಯುವ ಸಮಯದಲ್ಲಿ ರಾಮನನ್ನು ಕುರಿತು ಚಿಂತಿಸುವಳು. ಆದರೂ ಕೊನೆಗೊಮ್ಮೆ ರಾಮನ ಕಥೆಯನ್ನು ವಿವರಿಸಿ ಪತ್ರ ಬರೆಯುವಳು.

ನಾಗವೇಣಿಯು ತನ್ನ ಮಗನ ವಿಚಾರಗಳನ್ನು ತಿಳಿದು ಭಯಭೀತಳಾಗುತ್ತಾಳೆ. ರಾಷ್ಟ್ರಭಕ್ತಿಯ ಕಥೆಗಳನ್ನು ಮತ್ತು ಮಹಾತ್ಮಗಾಂಧೀಜಿಯವರ ವಿಚಾರಗಳನ್ನು ತಿಳಿದಿದ್ದ ಆಕೆಗೆ ತನ್ನ ಮಗನ ಬಂಧನದ ವಿಚಾರವನ್ನು ತಿಳಿದು ತುಂಬ ದು:ಖವಾಗುತ್ತದೆ. ಏಕೆಂದರೆ ತಂದೆಯಿಂದ ದೂರವಾಗಿರುವ ರಾಮ ಮತ್ತು ತನ್ನ ಬದುಕಿನ ವಿಚಾರ ಕುರಿತು ಆಕೆ ಯೋಚಿಸುತ್ತಾಳೆ. ರಾಮ ಬಿ. ಎ. ಓದುವುದನ್ನು ಹಾಳುಮಾಡಿಕೊಂಡು ಈ ರೀತಿ ಸೆರೆಮನೆಗೆ ಹೋಗಿರುವ ವಿಚಾರವನ್ನು ತಿಳಿದಂತಹ ನಾಗವೇಣಿಯು ರಾಮ ತನ್ನ ಭವಿಷ್ಯವನ್ನು ತಾನೇ ಕೆಡಿಸಿಕೊಂಡ ಎಂದು ಚಿಂತಿಸುತ್ತಾಳೆ. ಒಂದು ವೇಳೆ ತನ್ನಿಂದ ರಾಮನು ದೂರವಾದರೆ ತಾನು ಯಾವ ರೀತಿ ಬದುಕಬೇಕು ಎಂದು ನೊಂದುಕೊಳ್ಳುತ್ತಾಳೆ. ಕೊನೆಗೆ ತನ್ನಷ್ಟಕ್ಕೆ ತಾನೇ ನಾಗವೇಣಿಯು ಹೀಗೆ ತನ್ನ ಹಣೆಯ ಬರಹಕ್ಕೆ ಯಾರಿಂದಲೂ ಸುಖ ಸಿಗಲಾರದು ತಾನು ಯಾವುದೋ ಪಾಪ ಮಾಡಿ ಬಂದಿರಬೇಕು. ಆದ್ದರಿಂದಲೇ ಈ ರೀತಿ ಸಮಸ್ಯೆಗಳು ತನಗೆ ಬಂದು ಎರಗುತ್ತಿರುವುದು. ಇನ್ನು ತನ್ನ ಮಗ ರಾಮನಿಂದಲೂ ಯಾವ ಸಂತೋಷವು ಸಿಗುವುದಿಲ್ಲ ಎಂದು ತನ್ನ ಮಗನು ಸೆರೆಮನೆಯ ವಾಸಕ್ಕೆ ಒಳಗಾಗಿರುವ ವಿಚಾರವನ್ನು ಕೇಳಿ ದು:ಖಿಸುವಳು.

ರಾಮನ ದೇಶಪ್ರೇಮವನ್ನು ಈ ನಿದರ್ಶನದ ಮೂಲಕ ಗುರುತಿಸಬಹುದು. ಇತ್ತ ದೇಶಭಕ್ತನಾದ ರಾಮನು ಇನ್ನಷ್ಟು ರಾಷ್ಟ್ರಾಭಿಮಾನದಿಂದ ಕುದಿದನು. ವೆಲ್ಲೂರಿನ ಕಾರಾಗೃಹ ಆಗೊಂದು ಖಾದಿಯ ಸಂತೆಯಾಗಿತ್ತು. ಸಂತೆಯೊಳಗಿನದೇ ಶಿಸ್ತು. ಅದೇ ಬೊಬ್ಬೆ.

ಅದೇ ಜಿಂದಾಬಾದ್ ಗಳಿಂದಾಗಿಯೇ ಗಾಂಧೀ ಕೀ ಜೈ ಗಳಿಂದಾಗಿಯೇ ಹತ್ತು ಬಾರಿಯಾದರೂ ಸ್ವರಾಜ್ಯ ಕೈಗೆ ಬಂದು ಇಳಿಯಬೇಕಿತ್ತು. ಅಲ್ಲಿ ನಾನಾ ಊರಿನವರು ಕಲೆತರು. ಹೀಗೆಯೇ ಜೈಲು ತುಂಬಿದ್ದಾದರೆ ಮುಂದಿನ ವರ್ಷದೊಳಗೆ ಬ್ರಿಟನ್ನು ಧ್ವಂಸವಾಯಿತೆಂದೇ ತಿಳಿದಿದ್ದರು. ಬಹು ಜನರ ತೀರ್ಮಾನಕ್ಕೆ ರಾಮನ ಭಾವಾತಿರೇಕ ತಲೆಬಾಗಿತ್ತು.

ಇತ್ತ ಸೆರೆಯಾಳುಗಳಿಂದ ಜೈಲು ಬಿರಿಯುವಂತಾಯಿತು ಅವರು ಖೈದಿಗಳಿಗೆ ಕೊಡುವ ಅನ್ನಾಹಾರಗಳು ತೀರಾ ಬಡ ಕೂಲಿಗಳಿಗೆ ಕೊಡುವಂತಹ ಆಹಾರಕ್ಕಿಂತ ಉತ್ತಮವಾಗಿರಲಿಲ್ಲ. ಅಲ್ಲಿನ ಬಂಧಿಗಳನ್ನು ಇದು ಮತ್ತಷ್ಟು ಉದ್ವೇಗಕ್ಕೆ ಗುರಿಮಾಡಿತ್ತು. ಊಟಕ್ಕೆ ಮುಷ್ಕರ ಮಾಡುವ ಹಠವಾಯಿತು. ಅಧಿಕಾರಿಗಳು ಇಳಿದರು. ತುಸು ಉತ್ತಮ ಅನ್ನವನ್ನು ಒದಗಿಸಿಕೊಟ್ಟರು. ಸತ್ಯಾಗ್ರಹಿಯೊಬ್ಬನನ್ನು ಅಡುಗೆಗೆ ಬಿಟ್ಟರು.

ಮುಷ್ಕರದಿಂದ ಜಗತ್ತನ್ನೇ ಸೋಲಿಸಬಹುದು ಎಂಬುದನ್ನು ಬಲ್ಲ ತರುಣ ಕಮ್ಯುನಿಸ್ಟ್‌ನೊಬ್ಬನು ಅಲ್ಲಿಯೇ ಕಾರ್ಲ್ ಮಾರ್ಕ್ಸ್, ಲೆನಿನ್, ಟ್ರಾವಸ್ಕಿಯವರ ತತ್ವಗಳ ಪ್ರಭಾವಕ್ಕೆ ಒಳಗಾಗತೊಡಗಿದನು. ರಾಮನಾದರೂ ಬಡತನದಲ್ಲಿ ದಣಿದುಬಂದವನಾದುದರಿಂದ ಅವನಿಗೆ ಗಾಂಧೀಯ ವ್ಯಕ್ತಿತ್ವ ಆಕರ್ಷಣೆಯನ್ನುಂಟುಮಾಡಿತು. ಕೆಲವರು ಸ್ವರಾಜ್ಯ ಸಿಗುವತನಕ ಸತ್ಯಾಗ್ರಹ ಪಾಲಿಸಿ, ಕಮ್ಯುನಿಸಂ, ಸಮತಾವಾದಿ ಆನಂತರ ಸಾಮಾಜಿಕ ನಿರ್ಮಾಣದ ಆಶಯವನ್ನೊಂದಿದ್ದರು.

"ತರುಣ ಸಮುದಾಯಕ್ಕೆ ಅಭಿಮಾನ ಆವೇಶಗಳೇ ತರ್ಕ ಸಾಧನಗಳು. ಗಂಟಲೇ ವಿವೇಚನೆ ಹೀಗಿರಲು ಆ ಆವರಣದಲ್ಲಿ ರಾಮನ ಮತಿಯೊಳಗೆ ರಾಜಕೀಯ ವಿಚಾರಗಳಲ್ಲಿ ಸಮತೋಲನ ಬರಲುಂಟೇ? ಒಮ್ಮಿಂದೊಮ್ಮೆಲೇ ಜೈಲಿನ ಕದ ತೆರೆದರು. ಸತ್ಯಾಗ್ರಹಿಗಳನ್ನು ಹಿಡಿದು ಬೇಸತ್ತವರೇ ಜೈಲಿನ ಕದವನ್ನು ತೆರೆದರು. ನಿಮ್ಮಿಷ್ಟ ಬಂದಂತೆ ಹೋಗಿರಿ ಎಂದರು. ಗಾಂಧೀ ಇರ್ವಿನ್ನಿನ ಸಂಧಾನದ ಫಲವದು.

ರಾಮನು ವೆಲ್ಲೂರಿನ ಬೀದಿಗಳಲ್ಲಿ ಬಂದು ಮುಖ ತೋರಿಸಿದನು. ಅವನಿಗೆ ಉಡುವುದಕ್ಕೆ ಬೇರೆ ಬಟ್ಟೆಯಿರಲಿಲ್ಲ. ಊರಿಗೆ ಮರಳಲು ಕಾಸಿರಲಿಲ್ಲ. ಕೊಂಡು ಬಂದಲ್ಲಿಗೆ ಅವರನ್ನೂ ಒಯ್ಯುವ ಸಮನಾದ ವ್ಯವಸ್ಥೆಯು ಇರಲಿಲ್ಲ. ಕೊನೆಗೆ ಸತ್ಯಾಗ್ರಹ ಎಂಬ ಟಿಕೇಟಿನ ಮೇಲಿನಿಂದ ರಾಮ ಹಲವು ನವೀನ ಗೆಳೆಯರನ್ನು ಕೂಡಿಕೊಂಡು ವೆಲ್ಲೂರಿನಿಂದ ಕಟ್ಪಾಡಿಗೆ

ಬಂದನು. ಮುಂದೆತ್ತ ತಿರುಗಬೇಕು? ಮದ್ರಾಸಿಗೋ? ಮಂಗಳೂರಿಗೋ ? ಎರಡೂ ಟಿಕೇಟಿಲ್ಲದ ಪಯಣ. ಪರೀಕ್ಷೆ ತಪ್ಪಿತೆಂಬುದು ತಿಳಿದಿತ್ತು. ಹಾಗಿರಲು ಮದ್ರಾಸಿಗೆ ಹೋಗಿ ಮಾಡುವುದೇನು ? ಜೈಲಿನಲ್ಲಿದ್ದಾಗ ಅವನಿಗೆ ತಾಯಿಯ ಹಂಬಲ ಬಹಳವಾಗಿ ಆಗಿತ್ತು. ಏನೆನ್ನುವಳೋ ಅಮ್ಮ _! ಎಂಬ ಅಂಜಿಕೆ ಒಳಗೆ ಹೆಚ್ಚುತ್ತಿತ್ತು. ಆದರೂ ಮೂರು ವರ್ಷಗಳಾದವು. ತಾಯಿಯನ್ನು ಕಾಣದೆಯೇ ಇನ್ನು ನೋಡದೆ ಹೋದರೆ ಎಂದು ನಿರ್ಧರಿಸಿ ಮಂಗಳೂರಿನ ದಾರಿಯನ್ನೇ ಆರಿಸಿದನು" ೩ ಹೀಗೆ ರಾಮನು ತನ್ನ ವಿದ್ಯಾಭ್ಯಾಸದ ಸಮಯದಲ್ಲಿಯೇ ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆಗೆ ಹೋಗುವುದನ್ನು ಮುಖ್ಯವಾಗಿ ಇಲ್ಲಿ ಗುರುತಿಸಬಹುದಾಗಿದೆ. ಅದೇ ರೀತಿ ತನ್ನ ಬಿ.ಎ. ಪದವಿಗಿಂತ ಸ್ವಾತಂತ್ರ್ಯವೇ ರಾಮನಿಗೆ ಮುಖ್ಯವಾಯಿತು. ಇದು ರಾಮನಿಗೆ ಇದ್ದ ಸ್ವಾತಂತ್ರ್ಯ ರಾಷ್ಟ್ರ ನಿರ್ಮಾಣದ ಬದ್ದತೆಗೆ ಸಾಕ್ಷಿಯಾಗಬಹುದಾದ ಪ್ರಸಂಗವೆಂದು ಭಾವಿಸಬಹುದಾಗಿದೆ.

ಹೀಗೆ ರಾಮನ ಪಾತ್ರವು ಈ ಕಾದಂಬರಿಯಲ್ಲಿ ಸ್ವಾತಂತ್ರ್ಯ ಚಳುವಳಿ ಮತ್ತು ಆದರ್ಶದ ದೃಷ್ಟಿಯಿಂದ ತುಂಬ ಪ್ರಮುಖವಾದದ್ದು ಎಂದು ಹೇಳಬಹುದು. 'ಮರಳಿ ಮಣ್ಣಿಗೆ' ಯನ್ನು ಕುರಿತು ಜೆ. ಶ್ರೀನಿವಾಸ ಮೂರ್ತಿಯವರು "ಮರಳಿ ಮಣ್ಣಿಗೆಯ ಕಾಲ ನಾಡಿನ ಸ್ವಾತಂತ್ರ್ಯದ ಜೊತೆಗೆ ವ್ಯಕ್ತಿ ಸ್ವಾತಂತ್ರ್ಯವನ್ನು ಬಳಸಿ ಪಾಶ್ಚಾತ್ಯ ಪ್ರಭುತ್ವವನ್ನು ಪ್ರಾದೇಶಿಕ ಪರಂಪರೆಯಲ್ಲಿನ ಶೃಂಖಲೆಗಳನ್ನು ಒಟ್ಟಿಗೆ ವಿರೋಧಿಸುವ ಕಾಲ. ಆಗಲೇ ಪಾಶ್ಚಾತ್ಯ ವಿಜ್ಞಾನ ತಂತ್ರಜ್ಞಾನಗಳಿಂದ ಬಂದ ಹೊಸ ಶಿಕ್ಷಣ ಹೊಸ ಉತ್ಪಾದನಾ ಕ್ರಮ ಹಾಗೂ ಅದರಿಂದ ಉದ್ಭವಿಸುವ ಜೀವನ ಮೌಲ್ಯಗಳ ಪಲ್ಲಟ ಇವುಗಳನ್ನು ಒಪ್ಪುತ್ತಲೇ ತನ್ನ ಮಾತೃ ಸಂಸ್ಥೆಯ ಪರಿಷ್ಕೃತ ಕಲೆ ಸಂಪ್ರದಾಯಗಳನ್ನು ತೆಕ್ಕೆಗೆ ತೆಗೆದುಕೊಳ್ಳುವುದು ಕಂಡುಬರುತ್ತದೆ, ಕಾರಂತರಲ್ಲಿ ಕಾಣುವುದು ಇಂತಹ ಹಿನ್ನೆಲೆಯಲ್ಲಿನ ವಾಸ್ತವ ವಾದವನ್ನೇ ಆದ್ದರಿಂದ ಪಾಶ್ಚಾತ್ಯ ಕಲ್ಪನೆಯಲ್ಲಿನ ನೇರ **(Liner)** ಪ್ರಗತಿಗೂ, ಭಾರತೀಯ ಕಥಾನಕದ ಚಕ್ರದ ಗತಿಗೂ, ಕಸಿಯಾಗಿ ಸುರುಳಿಯಾಗಿ ಬಿಚ್ಚಿಕೊಳ್ಳುವ (ಹಿಂದಿನ ಭಾರತೀಯ ಕಥಾನಕಗಳಂತೆ ಸುತ್ತಿಕೊಳ್ಳುವುದಿಲ್ಲ) ಕಾದಂಬರಿಯಲ್ಲಿ ಮರಳುವಿಕೆಯು ಬೆಳೆಯುವಿಕೆಯು ಎರಡು ಸಾಧಿತವಾಗುತ್ತದೆ. ಭೌತಿಕ ಬೆಳವಣಿಗೆ ತತ್ಸಂಬಂಧಿಯಾದ ಬೌದ್ಧಿಕ ಬೆಳವಣಿಗೆ ಐತಿಹಾಸಿಕವಾಗಿ ಪ್ರಗತಿ ಸೂಚಿಸಿದರೆ ಭಾವನಾತ್ಮಕ ಸಂಬಂಧಗಳು ಸ್ಥಗಿತ ವಾಸ್ತವವನ್ನೇ ಸೂಚಿಸುವುದನ್ನು ಕಾರಂತರ ಕಾದಂಬರಿಗಳಲ್ಲಿ ವಿಶೇಷವಾಗಿ ಪ್ರಸ್ತುತ ಕಾದಂಬರಿಯಲ್ಲಿ ಕಾಣಬಹುದು.

ಹಾಗೆಯೇ ಪ್ರಪಂಚದಲ್ಲಿ ರಾಷ್ಟ್ರೀಯವಾದ, ಆತ್ಮ ಪ್ರತಿಷ್ಠೆಗಳು ಮಹಾಯುದ್ಧವನ್ನು ಮೆರೆಸಿದ್ದಾರೆ, ಭಾರತದಲ್ಲಿ ರಾಷ್ಟ್ರೀಯವಾದ ಹೊಸ ಚೇತನದಿಂದ ತಲೆ ಎತ್ತಿ ನಮ್ಮ ನಾಡಿನ ಬಗ್ಗೆ ಪ್ರೀತಿ ಬೆಳೆಸಬೇಕಾದ ಸಂದರ್ಭವಿತ್ತು. ಆಗಿನ ಭಾವುಕ ಧ್ವನಿಯೇ ತಾಯ್ನಾಡಿಗಾಗಿ ದುಡಿಯಿರಿ ಎಂದು ಇಂಗ್ಲಿಷ್ ಭಾಷೆ, ವೇಷ ಭೂಷಣವಷ್ಟೇ ಅಲ್ಲ, ಅದರ ಉತ್ಪಾದನಾ ಕ್ರಮವನ್ನೇ ಧಿಕ್ಕರಿಸಿ, ಗ್ರಾಮೋದ್ಧಾರ, ಹರಿಜನೋದ್ಧಾರ, ಅಂತ್ಯೋದಯ ಕಲ್ಪನೆಗಳನ್ನು ಸ್ವಾತಂತ್ರ್ಯ ಸಂಗ್ರಾಮದ ಜೊತೆಯಲ್ಲಿ ಪ್ರಚಾರಕ್ಕೆ ತಂದ ಕಾಲ. ಆಗ ದೇಶಕ್ಕೆ, ಊರಿಗೆ, ತನ್ನ ಭಾಷೆಗೆ ಮರಳಿರೆಂಬ ಕೂಗು ಎಲ್ಲ ಸಾಹಿತ್ಯದಲ್ಲಿಯೂ ಮಾರ್ದನಿಗೊಂಡಿತ್ತು.೪ ಎಂದು ಅರ್ಥಪೂರ್ಣವಾಗಿ 'ಮರಳಿ ಮಣ್ಣಿಗೆ' ಕಾದಂಬರಿಯನ್ನು ಕುರಿತು ಅಭಿಪ್ರಾಯಪಡುವರು.

ಹೀಗೆ 'ಮರಳಿ ಮಣ್ಣಿಗೆ' ಕಾದಂಬರಿಯು ಮೂರು ತಲೆಮಾರುಗಳ ಜೀವನ ಚಿತ್ರಣವನ್ನು ಪ್ರಮುಖವಾಗಿ ಒಳಗೊಂಡಿರುವ ಕಾದಂಬರಿಯಾದರೂ ಸ್ವಾತಂತ್ರ್ಯ ಚಳುವಳಿ ಮತ್ತು ಆದರ್ಶದ ದೃಷ್ಟಿಯಿಂದ ತುಂಬಾ ಮಹತ್ವದ ಪಾತ್ರವನ್ನು ನಿರ್ವಹಿಸಿದೆ. ಹಾಗೆ ಪಾರೋತಿ, ಸರಸೋತಿಯರ ಪಾತ್ರಗಳು ಆದರ್ಶತೆಯನ್ನು ಮೆರೆಯುತ್ತ ತಮ್ಮ ಮೌಲ್ಯಗಳನ್ನು ಸಮಾಜಕ್ಕೆ ತೋರಿಸುತ್ತಾ, ಆದರ್ಶದ ಗಣಿಗಳ ಹಾಗೆ ಕಾದಂಬರಿಯ ಉದ್ದಕ್ಕೂ ರಾರಾಜಿಸುತ್ತಾರೆ.

ಪ್ರಮುಖವಾಗಿ ಸ್ವಾತಂತ್ರ್ಯ ಚಳುವಳಿ ಮತ್ತು ಆದರ್ಶ ಅನ್ನುವುದಕ್ಕಿಂತ ಹೆಚ್ಚಾಗಿ "ಈಚೆಗಿನ ಕಾದಂಬರಿಗಳಲ್ಲಿ ಕಾರಂತರ ಮನಸ್ಸಿಗೆ ವಿಷಾದ ಮುಸುಕಿರುವುದು ಸ್ಪಷ್ಟ. ಅವರ ರಾಜಕೀಯ ಕಾದಂಬರಿಗಳು ನಿಜವಾಗಿ ರಾಜಕೀಯ ಕಾದಂಬರಿಗಳಾಗದೆ ವಿಷಾದ, ನೋವು–ವ್ಯಂಗ್ಯಗಳಿಗೆ ತ್ರಿವೇಣಿ ಸಂಗಮವಾಗುತ್ತದೆ. ಸ್ವತಂತ್ರ ಭಾರತವು ಹಿಡಿದ ದಾರಿ ಅವರಿಗೆ ಜಿಗುಪ್ಸೆ ತಂದಿದೆ. ಪ್ರಾಯಶಃ ಶ್ರೇಷ್ಠ ಕಾದಂಬರಿ ಬೇಡುವ 'ದೂರ'ತ್ವವನ್ನು ಒಂದು ಬಗೆಯ ನಿರ್ಲಿಪ್ತತೆಯನ್ನು ಇಲ್ಲಿ ಸಾಧಿಸುವುದು ಅವರಿಗೆ ಆಗಿಲ್ಲ"೫ ಎಂದು ಎಲ್. ಎಸ್. ಶೇಷಗಿರಿ ರಾವ್ ಅಭಿಪ್ರಾಯಪಡುತ್ತಾರೆ. ಈ ಮೇಲಿನ ಅಭಿಪ್ರಾಯವು ಈ ಕಾದಂಬರಿಯನ್ನು ವಿಭಿನ್ನ ನೆಲೆಯಲ್ಲಿ ಆಲೋಚಿಸುವಂತೆ ಪ್ರೇರೆಪಿಸುತ್ತದೆ.

## ನವೋದಯ ಮತ್ತು ಕಾರಂತರು

ಕೋಟ ಶಿವರಾಮ ಕಾರಂತರದ್ದು ವಿರಾಟ್ ಪ್ರತಿಭೆಯೆನ್ನುವುದು ಈಗ ಸರ್ವಮಾನ್ಯವಾದ ಸಂಗತಿಯಾಗಿ ಹೋಗಿದೆ. ಕನ್ನಡ ನವೋದಯದ, ಏಕೆ ಭಾರತೀಯ ನವೋದಯದ ಘನ ಮಾದರಿಗಳ್ಳಲೊಬ್ಬರಾಗಿಯೂ, ಸರ್ವಾಂಗೀಣ ಸೃಷ್ಟಿಶೀಲತೆಯ ಮಹಾನ್ ವ್ಯಕ್ತಿತ್ವಗಳಲ್ಲೊಬ್ಬರಾಗಿಯೂ, ಇಂದು ಕನ್ನಡ ಸಾಹಿತ್ಯದ ಸಾರಸ್ವತ ಲೋಕದಲ್ಲಿ ರಾರಾಜಿಸುತ್ತಿದ್ದಾರೆ. ಅವರಿಗಿಂತ ತುಸುವೆ ಮೊದಲಿನ ರವೀಂದ್ರನಾಥ ಠಾಕೂರರಿಗೂ, ಇನ್ನೊಂದೆಡೆ ತುಸು ಕಾಲ-ದೇಶ ದೂರದ ಲಿಯಾನಾರ್ಡೋ ಡಾವಿಂಚಿಗೋ ಹೋಲಿಸುವುದು ಇಂದು ಕನ್ನಡ ಸಾಹಿತ್ಯದಲ್ಲಿ ವಾಡಿಕೆಯಾಗಿ ಪರಿಣಮಿಸಿದೆ.

ಕಾರಂತರು ಹೊಸದೊಂದು ಯುಗವನ್ನು ಉದ್ಘಾಟಿಸಿದರು ಎನ್ನುವುದು ಎಷ್ಟು ನಿಜವೋ ಅಷ್ಟೇ ಹೊಸದೊಂದು ಯುಗ ಕಾರಂತರನ್ನು ಸೃಷ್ಟಿಸಿತು ಎನ್ನೂವುದೂ ಅಷ್ಟೇ ಸತ್ಯವಾಗಿದೆ. ವ್ಯಷ್ಟಿ ಸಮಷ್ಟಿಗಳ ನಡುವಿನ ಈ ಸಹಜ ಪಾರಸ್ಪರಿಕ ಕ್ರಿಯೆಯಲ್ಲಿ ಅವರಿಬ್ಬರೂ ಒಬ್ಬರನ್ನೊಬ್ಬರು ಪ್ರಭಾವಿಸಿದರು. ಒಬ್ಬರಿಂದೊಬ್ಬರು ಪ್ರಭಾವಿತರಾದರು ಎಂಬ ವಿಷಯದಲ್ಲಿ ಸಂಶಯವಿಲ್ಲವೆಂದೇ ಹೇಳಬೇಕಾಗಿದೆ.

ಡಾ। ಡಿ. ಆರ್. ನಾಗರಾಜರವರು "೧೯೨೨-೪೭ರ ತನಕದ ಭಾರತೀಯ ಸಾಮಾಜಿಕ-ರಾಜಕೀಯ ಜೀವನದ ಅನುಭವಗಳು ಕಾರಂತ ಸಂವೇದನೆಯನ್ನು ಪೂರ್ಣವಾಗಿ ರೂಪಿಸಿವೆ ಮತ್ತು ನಿಯಂತ್ರಿಸಿವೆ. ಆಧುನಿಕ ಭಾರತದ ಚರಿತ್ರೆಯಲ್ಲಿ ಅತ್ಯಂತ ಮುಖ್ಯವಾದ ಯುಗ ಇದು. ಭಾರತ ಅತ್ಯಂತ ತೀವ್ರವಾಗಿ ಬದುಕಿದ ಯುಗ ಇದು. ಭಾರತದ ಸಾಮಾಜಿಕ, ರಾಜಕೀಯ ಜೀವನದ ಎಲ್ಲ ಶಕ್ತಿಗಳೂ, ಬೆಳವಣಿಗೆಗಳೂ ಮೂರ್ತೀಭವಿಸಿದ ಸ್ಫುಟಗೊಂಡ ಘಟ್ಟ ಇದು. ಈ ಯುಗದ ಕನ್ನಡಿ ಕಾರಂತ"[೬] ಎಂದು ಬಹಳ ಅರ್ಥಪೂರ್ಣವಾಗಿ ಕಾರಂತರು ಮತ್ತು ಅವರಿದ್ದ ಕಾಲಘಟ್ಟವನ್ನು ಸರಿಯಾಗಿಯೇ ವ್ಯಾಖ್ಯಾನಿಸಿದ್ದಾರೆಂದು ಭಾವಿಸಿದ್ದೇನೆ. ನಿಜಕ್ಕೂ ಆ ಯುಗದ ರನ್ನಗನ್ನಡಿಯ ಹಾಗೆ ಕನ್ನಡ ಸಾಹಿತ್ಯದಲ್ಲಿ ತಮ್ಮ ಸ್ಥಾನವನ್ನು ಗಟ್ಟಿಗೊಳಿಸಿದ್ದಾರೆ.

ಕಾರಂತರದು ಕನ್ನಡ ನವೋದಯದ ಯುಗ ಭಾರತೀಯ ನವೋದಯ ಯುಗದ ಒಂದು ಭಾಗ. ಇಡೀ ಭಾರತ ಹಾಗೂ ಅದರೊಳಗಿನ ಅನೇಕಾನೇಕ ಸಮುದಾಯಗಳು

ಸಂಕ್ರಮಣಾವಸ್ಥೆಯನ್ನು ಮೀರಿ ಬಂದ ಕಾಲ ಅಥವಾ ಘಟ್ಟವಾಗಿ ಪರಿಣಮಿಸಿತು. ಈ ಸಂಕ್ರಮಣ ಘಟಿಸಿದ್ದು ಬಹು ಮುಖ್ಯವಾಗಿ ವಸಾಹತುಶಾಹಿ – ಸಾಮ್ರಾಜ್ಯಶಾಹಿಗಳ ಪ್ರಭಾವದಿಂದ ಎನ್ನುವ ವಿಷಯವನ್ನು ಮಾತ್ರ ಎಂದೂ ಮರೆಯುವುದಕ್ಕೆ ಸಾಧ್ಯವಿಲ್ಲ. ಇಂಥ ಪರಕೀಯ ಪ್ರೇರಣೆ ಎಲ್ಲ ಐತಿಹಾಸಿಕ ವಿದ್ಯಮಾನಗಳಂತೆ ದ್ವಂದ್ವತೆ, ಸಂದಿಗ್ಧಗಳನ್ನು ಸೃಷ್ಟಿಸಿತು. ಜ್ಞಾನ – ಅಜ್ಞಾನ, ಶಿಕ್ಷಣ – ಅಶಿಕ್ಷಣ, ಸಮೃದ್ಧಿ – ಬಡತನ, ಪ್ರಗತಿ–ಸ್ಥಗಿತತೆಗಳಂತಹ ಪರಿಕಲ್ಪನೆಗಳು ನಮ್ಮ ಸಾಮಾಜಿಕ ಹಾಗು ವೈಯಕ್ತಿಕ ಜೀವನದ ದಿಕ್ಕುಗಳು ನಿರ್ಧರಿತವಾದವು. ಹೊಸತಾಗಿ ಹುಟ್ಟಿನಿಂದ ಆಧುನಿಕ ವಿದ್ಯಾಭ್ಯಾಸ ಪಡೆದ ಮಾಧ್ಯಮ ವರ್ಗವೊಂದು ಈಗ ನಮ್ಮ ಸಾಂಸ್ಕೃತಿಕ ವೈಚಾರಿಕ ಸಂವೇದನೆಯನ್ನು ಪರಿಷ್ಕರಿಸಿಕೊಡುವ ಸಾಹಸಕ್ಕೆ ಕೈ ಹಾಕಿತು. ಶಿವರಾಮ ಕಾರಂತರೂ ಈ ವರ್ಗದ ಭಾಗವಾದ್ದರಿಂದ ಅವರ ಅತ್ಯುಜ್ವಲ ಪ್ರತಿಭೆಯಲ್ಲಿಯೂ ಈ ಎಲ್ಲಾ ಪ್ರೇರಣೆಗಳು ಇರುವುದು ಕಾಣುತ್ತದೆ.

ಕನ್ನಡದ ನವೋದಯ ಕವಿಗಳು ರೊಮ್ಯಾಂಟಿಕ್ ಕವಿಗಳಿಗಿಲ್ಲದ ಕೆಲವು ವಿಶೇಷ ಅಂಶಗಳನ್ನು ತಮ್ಮ ಸಾಹಿತ್ಯ ಕೃತಿಗಳಿಗೆ ದಾಖಲಿಸಲು ಪ್ರಯತ್ನಿಸಿದರು. ಅಂದಿನ ಸಮಾಜದ ಸ್ಥಿತಿಗತಿಗಳು, ಬಡತನ, ಬದುಕಿನ ಸಾವು ನೋವುಗಳು, ಜೀವನದ ಸಂಕಷ್ಟಗಳು, ಭಾಷಾ ಸಮಸ್ಯೆ, ಸ್ವಾತಂತ್ರ್ಯದ ಹಂಬಲ, ದೇಶಾಭಿಮಾನ ಇವುಗಳು ಇವರ ಸಾಹಿತ್ಯ ಕೃತಿಗಳ ಮುಖ್ಯ ವಿಚಾರಧಾರೆಗಳಾಗಿದ್ದವು. ಅಲ್ಲದೆ ಇಂಗ್ಲೀಷಿನ ರೊಮ್ಯಾಂಟಿಕ್ ಕವಿಗಳಿಗಿಲ್ಲದ ಒಂದು ಅಧ್ಯಾತ್ಮಿಕ ಪ್ರಜ್ಞೆಯೂ ನವೋದಯ ಕವಿಗಳಿಗಿರುವುದನ್ನು ಕಾಣಬಹುದು ಎಂಬ ವಿಚಾರವನ್ನು ತಿಳಿದುಕೊಳ್ಳಲು ಸಾಧ್ಯವಿದೆ. ನವೋದಯದ ಪ್ರಮುಖ ಕವಿಗಳಾದ ಕುವೆಂಪು, ಕಾರಂತ, ಬೇಂದ್ರೆ ಮುಂತಾದವರ ಸಾಹಿತ್ಯ ಕೃತಿಗಳಲ್ಲಿ ಅದರಲ್ಲಿಯೂ ಕಾದಂಬರಿಗಳಲ್ಲಿ ಸಮಾಜದ ಸ್ಥಿತಿಗತಿಗಳನ್ನು ಸ್ವಾತಂತ್ರ್ಯದ ಹಂಬಲವನ್ನು ದೇಶಾಭಿಮಾನವನ್ನು ವ್ಯಕ್ತಪಡಿಸಿದ್ದಾರೆ. ಈ ವಿಚಾರಗಳು ಬರೀ ಕಾದಂಬರಿ ಕ್ಷೇತ್ರಕ್ಕೆ ಸೀಮಿತವಾಗಿಲ್ಲ. ಅಂದಿನ ಕವನಗಳ ಮೂಲಕವೂ ಈ ಮೇಲೆ ತಿಳಿಸಿದ ಅಂಶಗಳಿಗೆ ಹೆಚ್ಚು ಒತ್ತು ಕೊಟ್ಟು ಸಾಹಿತ್ಯ ಕೃಷಿಯನ್ನು ಮಾಡಿದ್ದಾರೆ. ಕಾರಂತರೂ ಸಹ ತಮ್ಮ ಪ್ರಮುಖ ಕಾದಂಬರಿಗಳಲ್ಲಿ, ಬದುಕಿನ ಸಾವು ನೋವು, ಜೀವನದ ಸಂಕಷ್ಟಗಳನ್ನು ದೇಶಾಭಿಮಾನ ಮುಂತಾದ ವಿಷಯಗಳನ್ನು 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಬಹು ಮುಖ್ಯವಾಗಿ ಗಮನಿಸಬಹುದೆಂದು ಭಾವಿಸುತ್ತೇನೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಹೊಸಗನ್ನಡ ಸಾಹಿತ್ಯ (ನವೋದಯ) ಒಂದು ಪ್ರಮುಖ ಹಂತ ಸಾಮಾಜಿಕ ಜೀವನದಲ್ಲಿ ಉಂಟಾದ ಸ್ಥಿತ್ಯಂತರಗಳು ಸಾಹಿತ್ಯದ ಮೇಲೂ

ಪ್ರಭಾವವನ್ನುಂಟುಮಾಡಿದವು. ಭಾರತ ದೇಶದ ಇತಿಹಾಸದಲ್ಲಿ ಬ್ರಿಟೀಷರ ಆಳ್ವಿಕೆ ಉಂಟಾಗಿ ಅದರಿಂದ ಸಾಮಾಜಿಕ, ರಾಜಕೀಯ – ಒಟ್ಟು ಸಾಂಸ್ಕೃತಿಕ ಬದುಕಿನ ಮೇಲೆ ಸಾಕಷ್ಟು ಬದಲಾವಣೆಗಳು ಬೆಳವಣಿಗೆಗಳನ್ನು ಉಂಟುಮಾಡಿದವು ಎಂಬ ವಿಚಾರವು ಮಹತ್ವದ ಅಂಶವಾಗಿದೆ. ಬ್ರಿಟೀಷ್ ಸರ್ಕಾರದ ವಿರುದ್ಧ ಪರಭಾಷೆ, ಪರಸಂಸ್ಕೃತಿಯ ವಿರುದ್ಧ ಹೋರಾಡುತ್ತಿರುವ ಭಾರತೀಯನ, ಕನ್ನಡಿಗನ ಮನಸ್ಸಿಗೆ "ಆಳಾಬ್ರಿಟಾನಿಯಾ' ದಂತಹ ಕವನಗಳು ಕಿರಿಕಿರಿಯುಂಟುಮಾಡಿದವು. ಇಂಗ್ಲೀಷ್ ವಿದ್ಯಾಭ್ಯಾಸದಿಂದ ಪರಿಣಾಮವಾಗಿ ಕಾಣಿಸಿಕೊಂಡ 'ಉದಾರವಾದ' 'ಆದರ್ಶವಾದ' 'ಮಾನವತಾವಾದ' ಗಳ ಬಗ್ಗೆ ಅವರಿಗೆ ತುಂಬಾ ಕಳಕಳಿಯಿರುವುದು ಕಂಡುಬರುತ್ತದೆ. ಅಲ್ಲದೆ ರಾಷ್ಟ್ರಿಯವಾದ ಉಪರಾಷ್ಟ್ರೀಯತೆ ಎಂಬ ಅಂಶಗಳನ್ನು ಈ ಸಂದರ್ಭದಲ್ಲಿ ಕಂಡುಕೊಳ್ಳಬೇಕು.

ನವೋದಯ ಕವಿಗಳು ಸಾಹಿತ್ಯದಲ್ಲಿ ಪೂರ್ಣ ದೃಷ್ಠಿ ಇರಬೇಕೆಂದು ಭಾವಿಸಿದರು. ಆದರೆ ವಾಸ್ತವವಾಗಿ ಬದುಕನ್ನು ಪೂರ್ಣ ದೃಷ್ಠಿಯಲ್ಲಿ ಇಡಿಯಾಗಿಯೇ ವಿವೇಚಿಸಲು ಸಾಧ್ಯವಿಲ್ಲ. ಬದುಕಿನ ಪ್ರತಿಕ್ಷಣವೂ ಒಬ್ಬ ವ್ಯಕ್ತಿಗೆ ಅನುಪಮವಾಗಿ ಕಂಡರೆ ಮತ್ತೊಬ್ಬ ವ್ಯಕ್ತಿಗೆ ಕಹಿಯಾಗಿರಬಹುದು. ಹಾಗಾಗಿ ಕಾರಂತರ "ಮರಳಿ ಮಣ್ಣಿಗೆ" ಕಾದಂಬರಿಯಲ್ಲಿ ಬದುಕಿನ ಪ್ರತಿಕ್ಷಣವನ್ನೂ ಕಾದಂಬರಿಕಾರರು ವಿವರಿಸಿರುವುದನ್ನು ಕಾದಂಬರಿಯ ಅಧ್ಯಯನದ ಮೂಲಕ ಕಂಡುಕೊಳ್ಳಬಹುದು. ನವೋದಯ ಕವಿಗಳು ನವಮಾನವತಾವಾದವನ್ನು ಎತ್ತಿಹಿಡಿದರು. ಇವರು ಆದರ್ಶವಾದಿಗಳು. ಇವರು ಮುಖ್ಯವಾಗಿ ಸಾಂಸ್ಕೃತಿಕ ವಿಘಟನೆಯ ಸಂದರ್ಭದಲ್ಲಿ ಪರದೇಶೀಯರು ನಮ್ಮ ಮೇಲೆ ದಾಳಿಗೆ ಬಂದಾಗ ಅವರನ್ನು ನೇರವಾಗಿ ಒಪ್ಪಲಾರದೇ ಭಾರತೀಯ ತತ್ವಗಳಿಗೆ ಮೊರೆ ಹೋಗುತ್ತಾರೆ. ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ರಾಮನ ಪಾತ್ರವು ಹೇಗೆ ಪರಕೀಯರ ವಿರುದ್ಧ ದಂಗೆಯೆದ್ದು ತನ್ನತನವನ್ನು ಮೆರೆಯಲು ಸಾಧ್ಯವಾಯಿತು ಎಂಬುದನ್ನು ತಿಳಿಯಬಹುದು. ಆದರ್ಶದ ಗುಣಲಕ್ಷಣಗಳನ್ನು ಮೈಗೂಡಿಸಿಕೊಂಡವರಲ್ಲಿ ಸರಸೋತಿ–ಪಾರೋತಿ, ನಾಗವೇಣಿ ಇತ್ಯಾದಿ ಪಾತ್ರಗಳ ಮೂಲಕ ಆದರ್ಶವನ್ನು ಕಂಡುಕೊಳ್ಳಬಹುದು. ಅದಕ್ಕಿಂತ ಹೆಚ್ಚಾಗಿ ಕಾರಂತರ ಮೇಲೆ ಆದರ್ಶವಾದಿಗಳ ಪ್ರಭಾವ ಬೀರಿರುವುದನ್ನು ಸೂಕ್ಷ್ಮವಾಗಿ ಗ್ರಹಿಸಲು ಸಾಧ್ಯವಾಗುತ್ತದೆ.

"ಕನ್ನಡ ಕಾದಂಬರಿ ಲೋಕದಲ್ಲಿ ಸಂಪೂರ್ಣವಾಗಿ ಹೊಸ ಶಕ್ತಿಶಾಲೀ ಯುಗವೊಂದು ಕಾರಂತರ ರೂಪದಲ್ಲಿ ಬಂತು. ಈ ಹಿನ್ನೆಲೆಯಲ್ಲಿಯೇ ಗಾಂಧೀವಾದಿ ರಾಜಕಾರಣ ಕೂಡ ಪ್ರಾರಂಭವಾಗಿತ್ತು. ವ್ಯಾಪಕವಾಗಿ ಬೆಳೆಯತೊಡಗಿತ್ತು ಎನ್ನುವುದು ಮುಖ್ಯ ವಾಸ್ತವವಾದ

ಅನ್ನುವ ಪ್ರಬೇಧವನ್ನು ಕಾರಂತರು ತಮ್ಮ ವ್ಯಕ್ತಿ ವಿಶಿಷ್ಟತೆಯೊಡನೆ ಕಟ್ಟಿದರು"೭ ಎಂದು ಡಿ. ಆರ್. ನಾಗರಾಜ ಅವರು ಸರಿಯಾಗಿಯೇ ಕಾರಂತರ ಕಾದಂಬರಿಯ ಬಗ್ಗೆ ವಿಶ್ಲೇಷಿಸಿದ್ದಾರೆ ಎಂದು ಗ್ರಹಿಸಿದ್ದೇನೆ.

ಮತ್ತೆ ಅವರೇ ಮತ್ತೊಂದು ಕಡೆ "ರಾಷ್ಟ್ರೀಯವಾದೀ ಕಾದಂಬರಿ ಧಾರೆ ಗಾಂಧೀವಾದವನ್ನು ಅಳವಡಿಸಿಕೊಂಡು ಕೆಲವು ಕಾದಂಬರಿಗಳನ್ನು ಸೃಷ್ಟಿಸಿತು. ಆನಂದಕಂದರ ಕಾದಂಬರಿಗಳು ಇದಕ್ಕೆ ಉದಾಹರಣೆ, ಆದರೆ ಗಾಂಧೀವಾದದ ತಿರುಳನ್ನು ಬಳಸಿಯೂ ರಾಷ್ಟ್ರೀಯವಾದ ಕನ್ನಡದಲ್ಲಿ ಒಳ್ಳೆಯ ಕಾದಂಬರಿಗಳನ್ನು ಸೃಷ್ಟಿಸಲಾಗಲಿಲ್ಲ. ಈ ಅರ್ಥದಲ್ಲೇ ಕಾರಂತರು ಒಂದು ಸ್ವತಂತ್ರ ಪರಂಪರೆಯಾಗಿ ಬೆಳೆದರು. ರಾಷ್ಟ್ರೀಯವಾದೀ ಕಾದಂಬರಿಧಾರೆ ಐವತ್ತರ ದಶಕದತನಕ ಪ್ರಭಾವಶಾಲಿಯಾಗಿತ್ತು. ಈ ಧಾರೆಯಲ್ಲಿ ಆನಂದಕಂದ, ಗೊರೂರು, ಅ. ನ. ಕೃ. ಕಟ್ಟೀಮನಿ, ತ. ರಾ. ಸು. ಮುಂತಾದವರು ಸೇರುತ್ತಾರೆ ಎಂಬ ಅಂಶದ ಹಿನ್ನೆಲೆಯಲ್ಲಿ ಕಾರಂತರ ಸಾಧನೆಗಳನ್ನು ನೋಡಬೇಕು. ಗುಡ್ಡಗಳಿಂದ ಸುತ್ತುವರಿದ ಮಹಾ ಪರ್ವತದಂತೆ ಅವರು ಕಾಣುತ್ತಾರೆ"೮ ಎಂದು ಕಾರಂತರ ರಾಷ್ಟ್ರೀಯವಾದಿ ಅಂಶವನ್ನು ಮನಗಂಡಿದ್ದಾರೆ. ವಾಸ್ತವವಾಗಿ ರಾಷ್ಟ್ರೀಯತೆ ಕಾರಂತರ ಸಂವೇದನೆಯನ್ನು ರೂಪಿಸಿರುವ ಪ್ರಮುಖ ಶಕ್ತಿಗಳಲ್ಲಿ ಒಂದು ಎಂಬ ಅಂಶವನ್ನು ಮನಗಾಣಬೇಕು.

"ಮರಳಿ ಮಣ್ಣಿಗೆ" ಕಾದಂಬರಿ ಪ್ರಕಟವಾಗುವುದಕ್ಕೆ ಮುಂಚೆ ಕನ್ನಡದಲ್ಲಿ ಆ ಮಟ್ಟದ ಕಾದಂಬರಿಗಳು ಸೃಷ್ಟಿಯಾದದ್ದೇ ವಿರಳವೆಂದರೆ ಬಹುಶ: ಅತಿಶಯೋಕ್ತಿಯಾಗಲಾರದೆಂದು ಭಾವಿಸುತ್ತೇನೆ. "ಕಾನೂರು ಸುಬ್ಬಮ್ಮ ಹೆಗ್ಗಡತಿ" ಬಿಟ್ಟರೆ "ಮರಳಿ ಮಣ್ಣಿಗೆ" ಯೊಂದಿಗೆ ಹೋಲಿಸಬಹುದಾದ ಮತ್ತೊಂದು ಕಾದಂಬರಿ ಆ ಘಟ್ಟದಲ್ಲಿ ನಮಗೆ ಕಾಣಸಿಗುವುದಿಲ್ಲ.

ವಸಾಹತುಶಾಹೀ ಆಡಳಿತದಿಂದಾಗಿ ಪ್ರವೇಶಿಸಿದ ಹೊಸ ಶಿಕ್ಷಣ ವ್ಯವಸ್ಥೆ ಮತ್ತು ಹೊಸ ಉದ್ಯೋಗಾವಕಾಶಗಳ ಮೂಲಕ ಸ್ಥಿತ್ಯಂತರಗೊಂಡ ಭಾರತೀಯ ಸಮಾಜ ಈ ಶತಮಾನದ ಆದಿಯಲ್ಲಿ ಹೊಸ ಕಲಾಪ್ರಕಾರಗಳನ್ನು ಬರಮಾಡಿಕೊಂಡಿತಷ್ಟನ್ನೇ ದಾಖಲಿಸಿದರೇ "ಚೋಮನದುಡಿ" ಕಾನೂರು ಸುಬ್ಬಮ್ಮ ಹೆಗ್ಗಡತಿ" ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ಆದರ್ಶ, ಆವೇಶ, ರೊಮ್ಯಾಂಟಿಕ್, ಕನಸುಗಾರಿಕೆಯ ಜಾಗದಲ್ಲಿ ಅಧಿಕೃತ ವಿವರಗಳು ದಟ್ಟವಾಗಿ ವಾಸ್ತವವಾದಿ ಕಾದಂಬರಿಯ ಆರಂಭವನ್ನು ಘೋಷಿಸುತ್ತವೆ. ಪರಂಪರಾಗತವಾದ

ಸಮಾಜವೊಂದು ವಸಾಹತುಶಾಹಿ ಪ್ರವೇಶದಿಂದ ಪಡೆದ ಅಘಾತವನ್ನು ಮೊದಲ ಘಟ್ಟವೆಂದಿಟ್ಟುಕೊಂಡರೆ ಐತಾಳರ ದ್ವಂದ್ವಗಳಿಗೆ ಒಂದು ಸಾಂಸ್ಕೃತಿಕ ಆಯಾಮ ತಾನಾಗಿ ಬಂದು ಬಿಡುತ್ತದೆ.

"ಮರಳಿ ಮಣ್ಣಿಗೆ" ವಾಸ್ತವವಾದಿ ಕಾದಂಬರಿಯಾಗಿದ್ದರೂ ಅವರು ವಾಸ್ತವಿಕ ವಿವರಗಳನ್ನು ದುಡಿಸಿಕೊಂಡಿರುವ ರೀತಿ ಮಹತ್ವದ್ದಾಗಿದೆ. ಗಿರಡ್ಡಿಯವರು ಹೇಳುವಂತೆ "ಕಾರಂತರಿಗೆ ವಾಸ್ತವತೆ ಕೇವಲ ವಿವರಗಳ ಮಾತಾಗಿಲ್ಲ. ಈ ವಿವರಗಳು ಸೂಚಿಸುವ ಬದುಕಿನ ಸಂಕೀರ್ಣತೆ, ಅಗಮ್ಯತೆಗಳು ಅವರಿಗೆ ಮಹತ್ವದ್ದಾಗಿವೆ"೯ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಒಟ್ಟಿನಲ್ಲಿ ವಾಸ್ತವತೆಯನ್ನು ಅವರು ತಾತ್ವಿಕ ಅರ್ಥದಲ್ಲಿ ಬಳಸಿಕೊಂಡಿದ್ದಾರೆ ಎಂಬ ಅಂಶವನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ.

ಪ್ರಪಂಚದಲ್ಲಿ ರಾಷ್ಟ್ರೀಯವಾದ ಆತ್ಮ ಪ್ರತಿಷ್ಠೆಗಳು ಮಹಾಯುದ್ಧವನ್ನು ಮೆರೆಸಿದ್ದರೆ, ಭಾರತದಲ್ಲಿ ರಾಷ್ಟ್ರೀಯವಾದದ ಹೊಸ ಚೇತನದಿಂದ ತಲೆ ಎತ್ತಿ ತಮ್ಮ ನಾಡಿನ ಬಗ್ಗೆ ಪ್ರೀತಿ ಬೆಳೆಸಬೇಕಾದ ಸಂದರ್ಭವಿತ್ತು. ಆಗಿನ ಭಾವುಕ ಧ್ವನಿಯ 'ತಾಯ್ನಾಡಿಗಾಗಿ ದುಡಿಯಿರಿ' ಎಂದು, ಇಂಗ್ಲೀಷ್ ಭಾಷೆ, ವೇಷವಷ್ಟೇ ಅಲ್ಲ, ಅದರ ಉತ್ಪಾದನಾಕ್ರಮಗಳನ್ನೇ ಧಿಕ್ಕರಿಸಿ ಗ್ರಾಮೋದ್ಧಾರ, ಹರಿಜನೋದ್ಧಾರ, ಅಂತ್ಯೋದಯದ ಕಲ್ಪನೆಗಳನ್ನು ಸ್ವಾತಂತ್ರ್ಯ ಸಂಗ್ರಾಮದ ಜೊತೆಯಲ್ಲಿ ಪ್ರಚಾರಕ್ಕೆ ತಂದ ಕಾಲ. ಆಗ ದೇಶಕ್ಕೆ ಊರಿಗೆ, ತನ್ನ ಭಾಷೆಗೆ ಮರಳಿರೆಂಬ ಕೂಗು ಎಲ್ಲಾ ಸಾಹಿತ್ಯದಲ್ಲೂ ಮಾರ್ದನಿಗೊಂಡಿತು. ೧೯೪೩ ರಲ್ಲಿ "ಮರಳಿ ಮಣ್ಣಿಗೆ" ಕಾದಂಬರಿಯಲ್ಲಿ ಕಾದಂಬರಿಯನ್ನು ವಿಮರ್ಶೆ ಮಾಡುತ್ತಾ ಡಿ. ಎಲ್. ನರಸಿಂಹಾಚಾರ್ಯ" ಈ ನಡುವೆ ನಮ್ಮ ಕಲಿತ ಜನ ಅನಿಶ್ಚಿತತೆಯಲ್ಲಿ ಕಂಗೆಟ್ಟಿವೆ. ಇದಕ್ಕೆ ಪ್ರತೀಕಾರವೇನು ಉತ್ತರ ಮರಳಿ ಮಣ್ಣಿಗೆ ಎಂಬ ಮಾತಿನಲ್ಲಿ ಅಡಗಿದೆ. ರಾಮನ ಜೀವನ ಇದನ್ನು ಆಡಿ ತೋರಿಸುತ್ತದೆ. ಮರಳಿ ಮಣ್ಣಿಗೆ ಎಂದು ನಮ್ಮ ದೇಶದ ನಾಯಕರು ಆಗಾಗ ಕೂಗಿ ಸಾರುತ್ತಿರುವ ಡಂಗುರದ ಅರ್ಥ ಈ ಕಾದಂಬರಿಯಲ್ಲಿ ಮೂರ್ತೀಭವಿಸುತ್ತದೆ"೧೦. ಎಂದು ಅರ್ಥಗರ್ಭಿತವಾಗಿಯೇ ವ್ಯಾಖ್ಯಾನಿಸಿದ್ದಾರೆ.

ಗಾಂಧೀವಾದದ ಅಮಲಿನಲ್ಲಿ ರಾಮ ಪಾನನಿರೋಧದ ಚಳುವಳಿ ನಡೆಸಲು "ಆಟ' ವನ್ನು ಒಮ್ಮೆ ಬಳಸಿಕೊಳ್ಳುತ್ತಾನೆ. ಅದೂ ಬಯಲಾಟವನ್ನು ನೋಡಿ ಹಿಗ್ಗಿ ಸಮಯ

ಕಳೆಯುತ್ತಿರುವಾಗ ಹಾಸ್ಯಗಾರನ ಮೂಲಕ ಪ್ರವೇಶಿಸಿ ಆವೇಶಭರಿತ ಲೆಕ್ಚರು ಕೊಡಲು ಆ ಆಟ ಆ ಕಲೆಯ ಜೊತೆಗೆ ಆಗಲಿ ಜನರ ಜೊತೆಗೆ ಆಗಲಿ ಸಾವಯವ ಸಂಬಂಧ ಏರ್ಪಡುವುದಿಲ್ಲ.

ಈ ಜನರಿಗೆ ಸಹಾಯ ಮಾಡುವ ಬದಲು ಅಳಿವೆಗೆ ಹಾರುವುದು ಒಳಿತು ಎಂದು ಇವನು ಮೆಲ್ಲಗೆ ದೇಶ ಭಕ್ತಿಯಿಂದಲೇ ಹಿಂತಿರುಗುತ್ತಾನೆ. ಮದ್ರಾಸು, ಮುಂಬಯಿಗಳಲ್ಲಿ ಗಾಂಧೀವಾದ, ಮಾರ್ಕ್ಸ್ ವಾದದ ಚಿಂತನೆಗಳನ್ನು ತನ್ನೊಳಗೆ ತೆಗೆದುಕೊಂಡರೂ ರಾಮನಿಗೆ ಅವು ಜೀವನದರ್ಶನಗಳಾಗಿ, ಏನು ಕೆಲಸ ಮಾಡುವುದಿಲ್ಲ. ಅವನ ಭಾವನಾ ಪ್ರಪಂಚವನ್ನು ಕಿಂಚಿತ್ತೂ ಪ್ರಭಾವಿಸುವುದಿಲ್ಲ.

ನವೋದಯದ ಕವಿಗಳಲ್ಲಿ ರಾಷ್ಟ್ರೀಯತೆ, ಗಾಂಧೀವಾದ, ಆದರ್ಶತೆ ಮುಂತಾದ ಅಂಶಗಳು ಪ್ರಭಾವ ಬೀರಿರುವುದಲ್ಲದೆ, ನಿಸರ್ಗ, ಅಧ್ಯಾತ್ಮಿಕತೆಯು ಪ್ರಭಾವ ಬೀರಿದೆ. ಹಾಗಾಗಿ ಕಾರಂತರ ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ನಿಸರ್ಗವನ್ನು ಬಹಳ ಸಮಯೋಚಿತವಾಗಿ ದುಡಿಸಿಕೊಂಡಿದ್ದಾರೆ ಎಂಬುದಂತೂ ಸತ್ಯ. ಮದುವೆಯ ವರ್ಣನೆಗಳನ್ನು ಮಾಡುವಾಗ ಆ ಪರಿಸರವನ್ನು ಚಿತ್ರಿಸುವ ಕೆಲಸ ಕಾದಂಬರಿಯಲ್ಲಾಗಿದೆ. ಸಾಮಾನ್ಯವಾಗಿ ಆರಂಭದಿಂದ ಅಂತ್ಯದವರೆಗೂ ಒಂದಲ್ಲಾ ಒಂದು ಬಗೆಯ ನಿಸರ್ಗದ ವರ್ಣನೆಗಳು ಕಾದಂಬರಿಯಲ್ಲಿ ಕಾಣುತ್ತವೆ.

ರಾಷ್ಟ್ರೀಯ ಪ್ರಜ್ಞೆ, ಗಾಂಧೀವಾದ, ಆದರ್ಶ, ನಿಸರ್ಗ ಮುಂತಾದ ಅಂಶಗಳು ಬರೀ ಕಾರಂತರ ಮೇಲೆ ಅಷ್ಟೇ ಪ್ರಭಾವ ಬೀರದೆ ನವೋದಯದ ಪ್ರಮುಖ ಕವಿಗಳಾದ ಕುವೆಂಪು, ಬೇಂದ್ರೆ, ಪು. ತಿ. ನ. ಮುಂತಾದವರ ಸಾಹಿತ್ಯ ಕೃತಿಗಳಲ್ಲಿ ದಟ್ಟವಾದ ಪ್ರಭಾವ ಬೀರಿರುವುದನ್ನು ಕಂಡುಕೊಳ್ಳಬಹುದು.

ಸಾಹಿತ್ತಿಕ ನೆಲೆಯಲ್ಲಿ "ರಾಷ್ಟ್ರೀಯತೆ" ಎಂದಕೂಡಲೆ ದೇಶಭಕ್ತಿ ಮೂಲವಾದ ಕಾರಣ 'ರಾಷ್ಟ್ರೀಯ" "ರಾಷ್ಟ್ರೀಯತೆ" ಎಂಬ ಮಾತುಗಳಿಗೆ ವಿಶಿಷ್ಟವಾದ ಅರ್ಥ ಹುಟ್ಟಿಕೊಂಡಿದ್ದು, ರಾಷ್ಟ್ರೀಯ ಚಳುವಳಿ ಎಂದು ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿಯೇ ಎಂಬುದನ್ನು ಮರೆಯಬಾರದು. ವಾಸ್ತವವಾಗಿ ರಾಷ್ಟ್ರೀಯತೆ ಎಂದಾಗ ಅದು ಸಂದರ್ಭದ ಮಹಿಮೆಯಿಂದ ದೇಶಭಕ್ತಿ ಮೂಲವಾದ ಆವೇಶ ಆದರ್ಶಗಳನ್ನು ಕುರಿತದ್ದೆಂದು ಭಾವಿತವಾದರೂ, ಅದು ಅಷ್ಟೇ ಅಲ್ಲ ಎಂಬುದನ್ನು ನಾವು ತಿಳಿದಿರಬೇಕು. ರಾಮನು ಬ್ರಿಟೀಷರ ವಿರುದ್ಧ ಹೋರಾಡಿ ಜೈಲಿಗೆ

ಹೋಗಿ ತನ್ನ ದೇಶಾಭಿಮಾನವನ್ನು ರಾಷ್ಟ್ರಕ್ಕಾಗಿ ಹೋರಾಡುವ ಮನೋಭಾವನೆಯನ್ನು ಆತನ ಆದರ್ಶ ಗುಣಗಳನ್ನು ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

ಡಾ। ಜಿ. ಎಸ್. ಶಿವರುದ್ರಪ್ಪನವರು ಹೇಳುವಂತೆ "ರಾಷ್ಟ್ರೀಯತೆ" ಎಂದರೆ ರಾಷ್ಟ್ರಕ್ಕೆ ಸಂಬಂಧಿಸಿರುವಿಕೆ" ಎಂಬ ವಿಶಾಲಾರ್ಥವನ್ನು ನಾವು ಗ್ರಹಿಸಬೇಕು"೧೧. ಹಾಗಾಗಿ ರಾಷ್ಟ್ರೀಯತೆಯನ್ನು ಸಂಕುಚಿತಾರ್ಥದಲ್ಲಿ ಅರ್ಥೈಸಿಕೊಳ್ಳಬಾರದು. ನವೋದಯ ಸಾಹಿತ್ಯಕಾಲದಲ್ಲಿ ಕನ್ನಡದಲ್ಲಿ 'ಉಪರಾಷ್ಟ್ರೀಯತೆ' ಯನ್ನು ಸಹ ಪ್ರಮುಖವಾಗಿ ಗುರುತಿಸಬಹುದಾಗಿದೆ. ಪಾಶ್ಚಾತ್ಯ ರೊಮ್ಯಾಂಟಿಕ್ ಕವಿಗಳಿಂದ ಪ್ರೇರಣೆ ಪಡೆದು ರೂಪುಗೊಂಡ ನವೋದಯ ಸಾಹಿತ್ಯ ಪಾಶ್ಚಾತ್ಯರ ಅನುಕರಣೆ ಎಂಬಂತೆ ತೋರದೆ ತನ್ನದೇ ಆದ ಪ್ರಾದೇಶಿಕತೆಯ ಸೊಗಸುಗಳನ್ನು ಅನೇಕ ಕವಿಗಳ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಪ್ರಕಟಪಡಿಸಿತು. ಕವಿತೆ, ಕತೆ, ನಾಟಕ, ಕಾದಂಬರಿ ಇತ್ಯಾದಿ ಪ್ರಕಾರಗಳಲ್ಲಿ ಕಾಣಬಹುದು. ಹೀಗಾಗಿ ಸ್ವಾತಂತ್ರ್ಯ ಪೂರ್ವದ, ನವೋದಯ ಕಾಲಮಾನದ ಕರಾವಳಿ ಸಮುದಾಯದ ದಟ್ಟ ಜೀವನಾನುಭವವನ್ನು ಕಾರಂತರು ತಮ್ಮ ಕಾದಂಬರಿಯೊಳಗೆ ಅಭಿವ್ಯಕ್ತಿಸಲು ಪ್ರಯತ್ನಿಸಿದರು. ಜೊತೆಗೆ ತಮ್ಮ ಕಥನ ಪ್ರಕಾರದ ಸಾಮಾನ್ಯ ವಿಸ್ತರಣೆಯನ್ನು ಯಶಸ್ವಿಯಾಗಿ ಕಟ್ಟಿಕೊಡುವಲ್ಲಿ ಗೆಲುವನ್ನು ಪಡೆದರು.

★★★★★★★★

## ಅಡಿ ಟಿಪ್ಪಣಿಗಳು :


೧. ಶಿವರಾಮ ಕಾರಂತ : ಮರಳಿ ಮಣ್ಣಿಗೆ, ಎಸ್. ಬಿ. ಎಸ್. ಪಬ್ಲಿಷರ್ಸ್ ಬೆಂಗಳೂರು ೧೯೯೬, ಪುಟ-೫.

೨. ಅದೇ ಪುಟ-೩೩೩

೩. ಅದೇ ಪುಟ – ೩೩೭

೪. ಟಿ. ಪಿ. ಅಶೋಕ (ಸಂ) ಕಾರಂತ ಮಂಥನ, ಕರ್ನಾಟಕ ಸಂಘ, ಪುತ್ತೂರು, ೧೯೯೪, ಪುಟ-೨೨೨.

೫. ಎಲ್. ಎಸ್. ಶೇಷಗಿರಿರಾವ್: ಸುಧಾ, ಪುಟ ೧೫, ೧೩, ಅಕ್ಟೋಬರ್ ೧೯೯೧

೬. ಡಿ. ಆರ್. ನಾಗರಾಜ : ಅಮೃತ ಮತ್ತು ಗರುಡ , ಅಕ್ಷರ ಪ್ರಕಾಶನ ಹೆಗ್ಗೋಡು,೨೦೦೩, ಪುಟ ೪೧-೪೨.

೭. ಅದೇ ಪುಟ ೪೦

೮. ಅದೇ ಪುಟ ೪೦

೯. ನ. ರವಿ ಕುಮಾರ್: (ಸಂ) ಕಾದಂಬರಿ ಕಣ್ಣಲ್ಲಿ ಕಾರಂತರು, ಪ್ರತಿಭಾ ಯುವ ವೇದಿಕೆ, ರಾಜಾಜಿನಗರ, ಬೆಂಗಳೂರು, ೧೯೯೨, ಪುಟ-೩೦.

೧೦. ಜಿ. ಎಸ್. ಶಿವರುದ್ರಪ್ಪ : ನವೋದಯ, ನೆಲಮನೆ ಪ್ರಕಾಶನ, ಮೈಸೂರು, ೧೯೮೧, ಪುಟ-೧೯.

೧೧. ಅದೇ ಪುಟ-೨೦.




## ಅಧ್ಯಾಯ: ೩

## ಗಂಡು ಹೆಣ್ಣಿನ ಸಂಬಂಧದ ನೆಲೆ

ಸಾಮಾನ್ಯವಾಗಿ ಯಾವುದೇ ಕಾದಂಬರಿಗಳಲ್ಲಿ ಗಂಡು ಹೆಣ್ಣಿನ ಸಂಬಂಧದ ನೆಲೆಯನ್ನು ಅಧ್ಯಯನ ಮಾಡುವುದಕ್ಕೆ ಪ್ರಾರಂಭಿಸಿದರೆ ಆ ಲೇಖಕನ ಉದ್ದೇಶ ಜೀವನಾದರ್ಶನಗಳನ್ನು ತಿಳಿದುಕೊಳ್ಳಬಹುದು. ಗಂಡು ಹೆಣ್ಣಿನ ಸಂಬಂಧ ಮನುಷ್ಯನ ಮೂಲಭೂತ ಸಂಬಂಧಗಳಲ್ಲಿ ಒಂದೆಂದು ಪರಿಗಣಿಸಲಾಗಿದೆ. ಈ ಸಂಬಂಧವು ಏಕಕಾಲಕ್ಕೆ ವೈಯಕ್ತಿಕವೂ, ಸಾಮಾಜಿಕವೂ ಆಗಿರುತ್ತದೆ. ಹೀಗಿದ್ದಾಗ ಮಾತ್ರ ಅವರವರ ನೆಲೆಯಲ್ಲಿ ಈ ಸಂಬಂಧವನ್ನು ಗ್ರಹಿಸಿಕೊಳ್ಳಲು ಸಾಧ್ಯವಾಗುತ್ತದೆ. ಭೂಮಿಯ ಮೇಲೆ ಎಂದಿನಿಂದ ಈ ಸಮಾಜವು ರೂಪು ತಳೆಯಿತೊ ಅಂದಿನಿಂದಲೂ ಇಂದಿನ ತನಕವೂ ಈ ಸಂಬಂಧವು ವಿವಿಧ ನೆಲೆಯಲ್ಲಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಆರಂಭದ ಸಮಾಜದಲ್ಲಿ ಗಂಡು ಹೆಣ್ಣಿನ ಸಂಬಂಧವು ಅಷ್ಟೇನೂ ವಿಕಾಸವನ್ನು ಪಡೆದುಕೊಂಡಿರಲಿಲ್ಲ. ಮಾನವ ನಾಗರೀಕನಾದಂತೆ ಆ ಸಂಬಂಧ ಹೆಚ್ಚು ವಿಕಾಸವೂ, ಕೃತಕವೂ, ಸಂಕೀರ್ಣವೂ ಆಗತೊಡಗಿದೆ. ಗಂಡು ಹೆಣ್ಣಿನ ಸಂಬಂಧವು ಸಾಂಸ್ಕೃತಿಕ ಚೌಕಟ್ಟಿನೊಳಗೆ ಬಂಧಿಸಿಡುವ ಕಾರ್ಯವನ್ನು ಪ್ರಾರಂಭಿಸಿತು. ಈ ಸಂಬಂಧವು ಬರೀ ಲೈಂಗಿಕ ಕ್ರಿಯೆಗೆ ಮಾತ್ರ ಸೀಮಿತವಾಗಿರದೆ ವಿಶಾಲವಾಗಿ ನೋಡುವ ಪ್ರವೃತ್ತಿಯು ಬೆಳೆಯತೊಡಗಿತು. ಈ ನೆಲೆಯಲ್ಲಿ ಕಾರಂತರ ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ವ್ಯಕ್ತವಾಗಿರುವ ಗಂಡು ಹೆಣ್ಣಿನ ಸಂಬಂಧದ ನೆಲೆಯನ್ನು ಗ್ರಹಿಸಬಹುದು ಎಂದು ಭಾವಿಸುತ್ತೇನೆ.

ಕಾದಂಬರಿ ಪರಂಪರೆಯ ಮೊದಲ ತಲೆಮಾರಿನವರಾದ ಕಾರಂತರು ಸ್ವಭಾವತಃ ತಮ್ಮ ವಿಶಿಷ್ಟ ವೈಚಾರಿಕ ನೆಲೆಯಿಂದ ವಿಶೇಷವಾಗಿ ಹೆಣ್ಣು ಗಂಡಿನ ಸಂಬಂಧವನ್ನು ವಿಶ್ಲೇಷಿಸುತ್ತಾರೆ. ಕಾರಂತರ ವೈಚಾರಿಕತೆ ಯಾವಾಗಲೂ ಗ್ರಾಮ ಸಮೂದಾಯದ ಪರವಾಗಿರುವುದೂ ಹೌದು. ಈ ಕಾರಣದಿಂದಾಗಿಯೇ ಕಾರಂತರ ಗ್ರಾಮೀಣ ಹೆಣ್ಣುಗಳು ಅನುಭವಿಸುವ ಕಷ್ಟಗಳ ಪರಂಪರೆಯನ್ನು ಚಿತ್ರಿಸುತ್ತಲೇ ಆ ಮಹಿಳೆಯರ ಬದುಕಿನ ಮೌಲ್ಯಗಳನ್ನು ವೈಭವೀಕರಿಸಿ ಚಿತ್ರಿಸಲು ಹಿಂದು ಮುಂದು ನೊಡಲಾರರು. ಮೌಲ್ಯಗಳನ್ನು ಎಷ್ಟು ಪ್ರಾಮಾಣಿಕವಾಗಿ ನೋಡಲು ಸಾಧ್ಯವಿದೆಯೋ ಅಷ್ಟನ್ನೂ ಕಾರಂತರು ತಮ್ಮ ಸ್ತ್ರೀ ಪಾತ್ರಗಳ ಮೂಲಕ ಮಾಡಿಸುತ್ತಾರೆ. ಇದೆಲ್ಲದರ ನಡುವೆಯೂ ಮೌಲ್ಯಗಳಲ್ಲಾಗುವ ಪಲ್ಲಟಗಳನ್ನು ಕೂಡ "ಮರಳಿ ಮಣ್ಣಿಗೆ"ಯಲ್ಲಿ ಅತ್ಯಂತ ಗಂಭೀರವಾಗಿ ಚಿತ್ರಿಸುತ್ತಾರೆ.

ಅಧ್ಯಯನದ ಅನುಕೂಲಕ್ಕಾಗಿ

ಅ) ಗಂಡ ಹೆಂಡತಿ ಸಂಬಂಧ.

ಆ) ತಾಯಿ ಮಗನ ಸಂಬಂಧ

ಇ) ಮಾವ ಸೊಸೆಯ ಸಂಬಂಧ – ಹೀಗೆ ವಿಂಗಡಿಸಿಕೊಂಡಿದ್ದೇನೆ.

ಅ) ಪಾರೋತಿಗೆ ಲಗ್ನವಾದ ಮೂರು ವರ್ಷಗಳಲ್ಲಿ ಆತನ ಗಂಡನನ್ನು ಕಳೆದುಕೊಳ್ಳುತ್ತಾಳೆ. ತದನಂತರ ಆಕೆಯ ಮಾವನು ಮರಣ ಹೊಂದುತ್ತಾನೆ. ಹೀಗಿದ್ದರೂ ಆಕೆಯು ಜೀವನ ನಡೆಸುವುದಕ್ಕೆ ಹೆದರದೆ ಬಹಳ ಅನ್ಯೋನ್ಯವಾಗಿಯೇ ತಮ್ಮ ಜೀವನವನ್ನು ನಡೆಸುತ್ತಾಳೆ. ಕಾರಂತರು ಈ ವಿಷಯವನ್ನು ಸಹಜವಾಗಿ ಪ್ರಸ್ತಾಪಿಸಿದ್ದಾರೆ. ಪಾರೋತಿಯು ತನ್ನ ಜೀವನದಲ್ಲಿ ಯಾವುದೇ ಅಸೆ ಆಕಾಂಕ್ಷೆಗಳನ್ನು ಇಟ್ಟುಕೊಂಡಿರಲಿಲ್ಲವೆ? ಎಂಬುದನ್ನು ಲೇಖಕರು ಎಲ್ಲಿಯೂ ಪ್ರಸ್ತಾಪಿಸಿಲ್ಲ. ಅಂದರೆ ಸಾಂಸ್ಕೃತಿಕ ಚೌಕಟ್ಟಿನೊಳಗೇ ಇದ್ದುಕೊಂಡು, ಆ ನೆಲೆಯಲ್ಲಿಯೇ ಅವಳನ್ನು ಅರ್ಥೈಸುವ ಪ್ರಯತ್ನ ಮಾಡಿದ್ದಾರೆ.

ರಾಮೈತಾಳರು ಸಾಂಸಾರಿಕ ಚಿಂತನೆಯನ್ನು ಮಾಡಿದ ಹಾಗೆ ಕಾಣುವುದಿಲ್ಲ. ಐತಾಳರು ಪೌರೋಹಿತ್ಯದ ಕಡೆಗೆ ತಮ್ಮ ಲಕ್ಷ್ಯವೆಲ್ಲವು ಕೇಂದ್ರೀಕರಿಸಿದಂತಿದೆ. ಪಾರೋತಿಯು ಬೇಸಾಯದ ಚಿಂತೆಯನ್ನು ಮಾಡುವಾಗ, ತಮ್ಮ ಮದುವೆಯ ದಿನದಿಂದ ಇಂದಿನವರೆಗೂ ಆಗಿರುವ ಘಟನೆಗಳನ್ನು ನೆನೆದು ದು:ಖವನ್ನು ಪಡುತ್ತಾಳೆ. ಆಕೆಯೆ ಒಂದು ಕಡೆ "ಮನುಷ್ಯರಾಗಿ ಹುಟ್ಟಿ ಫಲವೇನು? ದುಡಿಯುವುದಾಯಿತು! ಬಿತ್ತುವುದಾಯಿತು, ಬೆಳೆಯುವುದಾಯಿತು. ಯೋಚಿಸಿ ದಣಿಯುವುದಾಯಿತು"೧ ಈ ರೀತಿ ತನ್ನ ಅಸಹಾಯಕತೆಯನ್ನು ವ್ಯಕಪಡಿಸುತ್ತಾಳೆ. ಮುಂದುವರಿದು "ಸಂಸಾರಕ್ಕೆ ಬಂದು ಬಂಜೆಯಾಗಿ ಸಾಯಬೇಕೆ"?೨ ಎಂದು ತನ್ನ ಮನಸ್ಸಿನಾಳದಲ್ಲಿರುವ ಆಸೆಯನ್ನು ನೋವನ್ನು ವ್ಯಕ್ತಪಡಿಸಿದ ಹಾಗೆ ಕಾಣುತ್ತದೆ. "ತಾನು ಪಾಪಿ ತನ್ನ ಪೂರ್ವಕರ್ಮದ ಫಲ ಅನುಭವಿಸುತ್ತಿದ್ದೇನೆ"೩ ಎಂದು ಸಾಂಪ್ರದಾಯಿಕ ಸಂಸಾರದಲ್ಲಿ ಕಟ್ಟುಕಟ್ಟಳೆಗಳ ನಡುವೆಯೆ ತಮ್ಮ ಜೀವನವನ್ನು ಮುಂದುವರಿಸುವ ನಿರ್ಧಾರ ಮಾಡಿದ ಹಾಗೆ ಕಾಣುತ್ತದೆ. ಪಾರ್ವತಿಯೂ ಎಂದೂ ಸಂಪ್ರದಾಯ, ಸಂಸ್ಕೃತಿಯನ್ನು ಮೀರಿದ ಹಾಗೆ ಕಾಣುವುದಿಲ್ಲ. ಯಾರದೇ ಹಂಗಿಗೆ ಒಳಗಾಗದೆ ಅರ್ಥಪೂರ್ಣವಾದ ರೀತಿಯಲ್ಲಿ ಮುಂದಿನ ಜನಾಂಗಕ್ಕೆ ದಾರಿದೀಪವಾಗುವ ಹಾಗೆ ಮಾದರಿಯಾಗಿದ್ದಾಳೆ.

ರಾಮೈತಾಳರು ಯಾವಾಗಲೂ ಪಾರೋತಿ ಮತ್ತು ಸರಸೋತಿಯರಿಗೆ ಕಟುವಾಗಿ ಮಾತನಾಡದಿದ್ದರೂ ತಮ್ಮ ಮನಸ್ಸಿನಾಳದಲ್ಲಿ ಸರ್ವಾಧಿಕಾರಿ ಧೋರಣೆಯನ್ನು ಇಟ್ಟುಕೊಂಡಿರುವ ಹಾಗೆ ವೇದ್ಯವಾಗುತ್ತದೆ. ಲೇಖಕರು ಪುರುಷ ಪ್ರಧಾನ ಸಮಾಜವನ್ನು ಒಪ್ಪಿಕೊಳ್ಳುವ ಮನಸ್ಸಿದೆ ಎಂಬುದು ಐತಾಳರ ಮಾತಿನಿಂದ ತಿಳಿದುಬರುತ್ತದೆ. ಇವರು ಸಹ ಸಂಪ್ರದಾಯ ಮತ್ತು ಸಂಸ್ಕೃತಿಗಳೆರಡನ್ನೂ ಒಪ್ಪಿಕೊಂಡು ಆ ಮೌಲ್ಯಗಳನ್ನು ಅಳವಡಿಸಿಕೊಂಡಿರುವುದು ಗ್ರಹಿತವಾಗಿದೆ. ಐತಾಳರು ಮದುವೆಯಾಗುವ ನಿರ್ಧಾರ ಮಾಡಿದರೂ ಅದನ್ನು ತನ್ನ ಹೆಂಡತಿ ಮತ್ತು ಸರಸೋತಿಗೆ ತಿಳಿಸದೆ ಮೌನವಾಗಿದ್ದು, ತಮ್ಮ ಅಭಿಪ್ರಾಯಗಳನ್ನು ಎಲ್ಲರೂ ಒಪ್ಪಿಕೊಳ್ಳಲೇಬೇಕು ಎಂಬ ಹಠವನ್ನು ಮಾಡಿದ ಹಾಗೆ ಕಾದಂಬರಿಯಲ್ಲಿ ವ್ಯಕ್ತವಾಗಿದೆ. ಅಂದರೆ ಅವರ ಗಡಸುಧ್ವನಿ – ಪಾರೋತಿಯ ಮೃದು ಧ್ವನಿಯು ವ್ಯಕ್ತಪಡಿಸಿದ ಹಾಗೆ ತಿಳಿದುಬರುತ್ತದೆ.

ಒಟ್ಟಾರೇ ಕಾರಂತರು "ಹೆಣ್ಣಿನ" ಪಾತ್ರಗಳ ಬಗ್ಗೆ ಸಹಾನುಭೂತಿಯಿದೆ. ತಮ್ಮ ಜೀವನಕ್ರಮವನ್ನು ಬದಲಾಯಿಸಿಕೊಳ್ಳಲು ಆಗದೆ ಇರುವ ಅನಿವಾರ್ಯತೆಯಲ್ಲಿ ಯಾವುದೇ ಬಗೆಯ ಪಲಾಯನಕ್ಕೆ ಮನಸ್ಸು ಹರಿಸದೆ ಬದುಕನ್ನು ತೇಯುತ್ತಲೇ, ಆದರೆ ಹೀಗೆ ನಿಷ್ಠುರವಾಗಿ ತೇಯುತ್ತಲೆ ಅರ್ಥಪೂರ್ಣರಾಗಿಬಿಡುವ ಅಂಶವನ್ನು ಕಾರಂತರು ಗುರುತಿಸಿಕೊಳ್ಳುತ್ತಾರೆ. ತಮ್ಮ ಆವರಣವನ್ನು ಮೀರಿ ಹೊಸ ಬದುಕನ್ನು ಸೃಷ್ಟಿಸಿಕೊಳ್ಳುವ ಸಾಧ್ಯತೆಗಳನ್ನೆಲ್ಲ ಎತ್ತಿ ಹಿಡಿಯುತ್ತಾರೆ"೩ ಎಂದು ಟಿ. ಪಿ. ಅಶೋಕರವರು ಸ್ತ್ರೀ ಪಾತ್ರಗಳ ಬಗ್ಗೆ ತಳೆದ ನಿಲುವನ್ನು ಒಪ್ಪಬಹುದಾಗಿದೆ. ಪಾರೋತಿ, ಸರಸೋತಿ, ನಾಗವೇಣಿ ಇವರುಗಳು ತಮ್ಮ ಬದುಕಿನ ಅನಿವಾರ್ಯತೆಯನ್ನು ಯಾವುದೇ ಕಡೆ ತಮ್ಮ ಗಮನವನ್ನು ಹರಿಸದೆ ತಮ್ಮ ಜೀವನಕ್ಕಾಗಿ ತಮ್ಮ ಜೀವನವನ್ನು ಸವೆಸಿರುವುದು ಅವರ ನೆಲೆಯಲ್ಲಿ ನಿಂತು ಅಧ್ಯಯನ ಮಾಡಿದಾಗ ಮಾತ್ರ ಗೋಚರಿಸದಿರದು.

ಅವರೇ ಮತ್ತೊಂದು ಕಡೆ "ಕಾರಂತರು ಕಾಮವನ್ನು ಆರಾಧಿಸುವುದೂ ಇಲ್ಲ, ಧಿಕ್ಕರಿಸುವುದೂ ಇಲ್ಲ. ಒಪ್ಪಿಕೊಳ್ಳುತ್ತಾರೆ. ಬದುಕನ್ನು ಒಪ್ಪಿಕೊಳ್ಳುವಂತೆ ಅದರೆಲ್ಲ ಸೂಕ್ಷ್ಮತೆ, ಸಂಕೀರ್ಣತೆಗಳಲ್ಲಿ ಇದರರ್ಥ ಕಾರಂತರು ಲೈಂಗಿಕ ಸಂಬಂಧಗಳನ್ನು ಯಾಂತ್ರಿಕ ಸಂಬಂಧಗಳಾಗಿ ನೋಡುತ್ತಾರೆಂದಾಗಲೀ, ಅದರಲ್ಲಿನ ಚೆಲುವನ್ನು ಗಮನಿಸುವುದಿಲ್ಲವೆಂದಾಗಲೀ ಅಲ್ಲ. ಗಂಡುಹೆಣ್ಣಿನ ಲೈಂಗಿಕಾಕರ್ಷಣೆಯು ಹಳೆಯದೆಲ್ಲವನ್ನೂ ಮರೆಸಿ ಹೊಸಜೀವನದ ಸಾಧ್ಯತೆಗಳನ್ನೇ ತೆರೆಯುವಷ್ಟು ಸಾಮರ್ಥ್ಯವನ್ನು ಕೊನೆಯಪಕ್ಷ ಆ ಕ್ಷಣದಲ್ಲಾದರೂ ಕಾರಂತರ ಕಾದಂಬರಿ ಧ್ವನಿಸುತ್ತದೆ"೪ ಎಂದು ಲಚ್ಚ ಮತ್ತು ನಾಗವೇಣಿಯರ ಸಂಬಂಧದಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯವು ಸಮಂಜಸವೆಂದು ನಾನು ಭಾವಿಸುತ್ತೇನೆ. ಲಚ್ಚ ಮತ್ತು ನಾಗವೇಣಿಯರ

ಸಂಬಂಧವನ್ನು ಕಾದಂಬರಿಕಾರರೇ ಹೀಗೆ ವ್ಯಕ್ತಪಡಿಸಿದ್ದು, "ಇತ್ತ ವಯಸ್ಸು ತುಂಬಿ ಯೌವ್ವನದ ಕಾಂತಿಯನ್ನು ಸೂಸುತ್ತಿದ್ದ ನಾಗವೇಣಿಯ ಚೆಲುವು ಲಚ್ಚನ ಕಣ್ಣಿನಲ್ಲಿ ಬೆಳದಿಂಗಳನ್ನು ಚೆಲ್ಲಿತು. ಈ ರೂಪರಾಶಿಯನ್ನು ಮರೆತು ತಾನೆಲ್ಲಿಗೆ ಹೋಗಿದ್ದೆನೆಂಬ ಮರಳು ಅವನಿಗಾಯಿತು"[೬] ಮತ್ತೆ ಕಾರಂತರೇ ಮತ್ತೊಂದು ಕಡೆ "ಲಚ್ಚನು ನಾಗವೇಣಿಯ ಯೌವ್ವನವನ್ನು ತಿರುಗಿ ತನ್ನ ಅಧಿಕಾರಕ್ಕೆ ತಂದುಕೊಂಡ ಹಾಗಾಯಿತು. ಧರ್ಮ ಸ್ನೇಹಗಳಿಗೆ ಕಟ್ಟುಬಿದ್ದ ಅವಳ ಜೀವನವು ಇತರ ಎಲ್ಲಾ ಯೋಚನೆಗಳನ್ನು ಮರೆತು ಅವನಿಗೆ ಶಯ್ಯೆಯ ಕಾಲನ್ನು ಸಲ್ಲಿಸಿತು. ಆತನ ಮೇಲಿದ್ದ ಉಗ್ರ ವೈರವು ಮರೆವೆಯಾಯಿತು"[೭] ಎಂದು ನಾಗವೇಣಿಯ ಅಸಹಾಯಕತೆಯನ್ನು, ತನ್ನ ಗಂಡ ಎಂದಾದರೂ ತನ್ನ ಕುಟುಂಬದವರ ದಾರಿಗೆ ಬರಬಹುದೆಂದು ಚಿಂತಿಸುತ್ತಾಳೆ.

ಗಂಡು ಹೆಣ್ಣಿನ ಸಂಬಂಧದ ಬಗ್ಗೆ ಕೆ. ವಿ. ನಾರಾಯಣ ರವರು "ಗಂಡಸರು ಮತ್ತು ಹೆಂಗಸರ ವರ್ತನೆಗಳನ್ನು ಗಮನಿಸಿದರೆ ಇನ್ನೂ ಹೆಚ್ಚು ಸಂಗತಿಗಳು ಗೊತ್ತಾಗುತ್ತವೆ. ಅವರ ಹಲವಾರು ಕಾದಂಬರಿಗಳನ್ನು ನೋಡಿದರೆ ಪ್ರಾದೇಶಿಕ ವಾತಾವರಣದಿಂದ ಓಡಿ ಹೋಗೋವ್ರೆಲ್ಲಾ ಗಂಡಸರು ಆ ಗಂಡಸರು ದೇಶ ಬಿಟ್ಟು ಓಡಿಹೋಗೋರಿರಬಹುದು. ಕುಟುಂಬದ ಹೊಣೆಗಾರಿಕೆಯನ್ನು ತಪ್ಪಿಸಿಕೊಳ್ಳೋರಿರಬಹುದು. ತಮ್ಮ ಪಾಡಿಗೆ ತಾವು ಇದ್ದುಬಿಡುವವರಿರಬಹುದು. ಇವರೆಲ್ಲ ಹೀಗೆ ಯಾಕೆ ಮಾಡ್ತಾರೆ? ಕಾರಂತರ ಕಾದಂಬರಿಗಳು ಹೆಂಗಸರು ಒಟ್ಟು ಕುಟುಂಬ ವ್ಯವಸ್ಥೆಯನ್ನು ಹಿಡಿದಿಡತಕ್ಕ ಸಾಮರ್ಥ್ಯ ಪಡೆದಿದ್ದಾರೆ. ಕುಟುಂಬವನ್ನು ಬೆಳೆಸೋ ಸಾಮರ್ಥ್ಯ ಹೊಂದಿದ್ದಾರೆ"[೮] ಈ ಮೇಲೆ ತಿಳಿಸಿರುವ ಅಭಿಪ್ರಾಯವು ಲಚ್ಚ ಮತ್ತು ಪಾರೋತಿ, ನಾಗವೇಣಿಯರ ಜೀವನದಲ್ಲಿ ಆದಂತಹ ಸನ್ನಿವೇಶವನ್ನು ಕಣ್ಣಿಗೆ ಕಟ್ಟಿದ ಹಾಗೆ ಚಿತ್ರಿಸಿದ್ದಾರೆ. ನಾಗವೇಣಿಯು ಹಲವಾರು ಕಾರಣಗಳಿಂದ ತನ್ನ ಗಂಡನ ಪ್ರೀತಿಯಿಂದ ಪರಿತ್ಯಕ್ತೆಯಾದರೂ ಕುಟುಂಬದ ಜವಾಬ್ದಾರಿಯನ್ನು ನಿಭಾಯಿಸುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದಾಳೆ. ಆದರೆ ಲಚ್ಚನೂ ಹಲವಾರು ದುಶ್ಚಟಗಳಿಗೆ ಒಳಗಾಗಿ ತನ್ನ ಕುಟುಂಬದ ಗೌರವವನ್ನು ಕಾಪಾಡದೇ, ಕೈಹಿಡಿದಂತಹ ಹೆಂಡತಿಯನ್ನು ರಕ್ಷಿಸದೆ, ತಾನು ಹುಟ್ಟಿ ಬೆಳೆದಂತಹ ಪ್ರದೇಶವನ್ನು ಬಿಟ್ಟು ಹೋಗುತ್ತಾನೆ. ಇಂತಹ ಸನ್ನಿವೇಶಗಳನ್ನು ಕಾರಂತರು ಸಹಜವಾಗಿ, ಯಾವುದೇ ಒತ್ತಾಯಕ್ಕೆ ಮಣಿಯದ ಹಾಗೆ ವಾಸ್ತವಾಂಶಗಳನ್ನು ತಿಳಿಸುವ ಪ್ರಯತ್ನ ಮಾಡಿರುವುದನ್ನು ಈ ಅಧ್ಯಯನದಿಂದ ತಿಳಿದುಕೊಳ್ಳಬಹುದು.

**ಆ) ತಾಯಿ ಮಗನ ಸಂಬಂಧ :**

ಪ್ರಮುಖವಾಗಿ ನಾಗವೇಣಿ ಮತ್ತು ಲಚ್ಚರ ಸಂಬಂಧವನ್ನು ಉದಾಹರಿಸಬಹುದು. ಕಾರಂತರು ಸ್ವಂತ ಅನುಭವದಿಂದಲೇ ಚಿತ್ರಿಸಿರಬಹುದೇನೋ ಎಂಬ ಸಂಶಯ ಮೂಡುತ್ತದೆ. ನಾಗವೇಣಿ ಸಂಸ್ಕಾರ ಪಡೆದಂತಹ ಕುಟುಂಬದಲ್ಲಿ ಜನಿಸಿ ಬಂದಿದ್ದರಿಂದ ತನ್ನ ಗಂಡನ ಯಾವುದೇ ಹಂಗಿಗೆ ಒಳಗಾಗದೇ ತನ್ನ ಕುಟುಂಬ ಮತ್ತು ತನ್ನ ಮಗನ ಏಳಿಗೆಗೋಸ್ಕರ ತನಗೆ ಒದಗಿದ್ದ ಎಲ್ಲಾ ಕಷ್ಟಗಳನ್ನೂ ಸಹಿಸಿಕೊಳ್ಳುತ್ತಾಳೆ. ಎಲ್ಲಿ ತನ್ನ ಮಗ ನನ್ನನ್ನು ಮರೆತುಬಿಡುವನೋ ಎಂಬ ಆತಂಕವು ಆಕೆಯ ಮನಸ್ಸಿನಲ್ಲಿ ಮೂಡಿರುವುದಿಲ್ಲ.

ರಾಮನು ಆಧುನಿಕ ಸಮಾಜಕ್ಕೆ ಆದರ್ಶಪ್ರಾಯನಾಗಿ ತಾನು ಶಿಕ್ಷಣ ಪಡೆಯುವ ಸಂದರ್ಭದಲ್ಲಿ ಹಲವಾರು ಕಷ್ಟಗಳನ್ನು ಅನುಭವಿಸಿದರೂ ತನ್ನ ಛಲವನ್ನು ಬಿಡದೆ, ತನ್ನ ತಾಯಿಯನ್ನು ಸಂತೈಸುತ್ತಾ ಜೀವನದಲ್ಲಿ ಮುಂದುವರಿಯುವ ಸಾಹಸ ಮಾಡಿರುವ ವಿಚಾರವನ್ನು ಬಹಳ ಚೆನ್ನಾಗಿಯೇ ಕಾರಂತರು ವ್ಯಕ್ತಪಡಿಸಿದ್ದಾರೆ. ಈ ಸಂಬಂಧದ ನೆಲೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕಾರಂತರು ಆಧುನಿಕ ಸಮಾಜಕ್ಕೆ ಹೊಂದಿಕೊಳ್ಳುವ ರಾಮನ ಮೂಲಕ ಸಮಾಜಕ್ಕೆ ಒಳ್ಳೆಯ ಆದರ್ಶಗಳನ್ನು ತೋರಿಸುವ ಪ್ರಯತ್ನ ಮಾಡಿರಬಹುದೆಂದು ಭಾವಿಸಬಹುದು. ಈ ಸಂಬಂಧವನ್ನು ಗಮನಿಸಿದ ನಮಗೆ ನಿಜವಾಗಿಯೇ ಕಾರಂತರ ಜೀವನದಲ್ಲಿ ಘಟಿಸಿರಬಹುದೆಂದು ತೋರುತ್ತದೆ. ಇಷ್ಟೊಂದು ಸಹಜ ಮತ್ತು ನೈಜವಾಗಿ ಚಿತ್ರಿಸಬಲ್ಲ ಸಾಮರ್ಥ್ಯವು ಕಾರಂತರಿಗೆ ಲಭಿಸಿದೆ.

**ಇ) ಮಾವ ಸೊಸೆಯ ಸಂಬಂಧ :**

ಪ್ರಮುಖವಾಗಿ ಇಲ್ಲಿ ರಾಮೈತಾಳ ಮತ್ತು ನಾಗವೇಣಿಯರ ಸಂಬಂಧದ ನೆಲೆಯನ್ನು ಕುರಿತು ವಿವೇಚಿಸಲಾಗಿದೆ. ರಾಮೈತಾಳರು ತಮ್ಮ ಮಗ ಬುದ್ಧಿವಂತನಾಗಲಿ ಎಂದು ಸಂಪ್ರದಾಯವನ್ನು ಮೀರಿ, ಆಧುನಿಕ ಶಿಕ್ಷಣವನ್ನು ಕೊಡಿಸಿದರು. ತಮ್ಮ ಮಗನಿಂದ ಯಾವುದೇ ತರಹದ ಉಪಯೋಗವನ್ನು ಪಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಅಲ್ಲಿಗೆ ತಮ್ಮ

ಜೊತೆಯಲ್ಲಿ ದ್ವೇಷವನ್ನು ಕಟ್ಟಿಕೊಂಡಂತಹ ಶೀನಮ್ಮಯ್ಯ ಜೊತೆಯಲ್ಲಿ ವಿಶ್ವಾಸವನ್ನು ತೋರಿಸುತ್ತಿದುದ್ದನ್ನು ಮಾತ್ರ ರಾಮೈತಾಳರಿಗೆ ಇಷ್ಟವಾಗುತ್ತಿರಲಿಲ್ಲ.

ತಮ್ಮ ಜೀವನದಲ್ಲಿ ಅನೇಕ ಆದರ್ಶಗಳನ್ನು ಪಾಲಿಸಿಕೊಂಡು ಬಂದರೂ ಮಗನಿಂದ ಅವುಗಳನ್ನು ಮುಂದುವರಿಸಿ ತಮ್ಮ ಮನೆತನದ ಗೌರವವನ್ನು ಕಾಪಾಡಿಕೊಳ್ಳಬೇಕೆಂಬ ಉದ್ದೇಶವನ್ನು ಇಟ್ಟುಕೊಂಡಿರಬಹುದೆಂದು ಭಾವಿಸುತ್ತೇನೆ. ಲಚ್ಚ ಮಾತ್ರ ಯಾವುದೇ ಆದರ್ಶ ಉದ್ದೇಶಗಳಿಗೆ ತಲೆಕೆಡಿಸಿಕೊಳ್ಳದೆ ತನ್ನದೇ ಆದ ರೀತಿಯಲ್ಲಿ ಚಿಂತನೆ ಮಾಡುವ ಅದಕ್ಕನುಗುಣವಾಗಿ ತನ್ನ ವರ್ತನೆಯನ್ನು ಬದಲಾಯಿಸಿಕೊಳ್ಳುವ ಮಾರ್ಗದಲ್ಲಿ ಅವನ ಮನಸ್ಸು ತುಡಿಯುತ್ತಲೇ ಇರುತ್ತದೆ.

ರಾಮೈತಾಳರು ತಮ್ಮ ಮಗನಿಂದ ಏನನ್ನು ಸಾಧಿಸಲು ಸಾಧ್ಯವಾಗಲಿಲ್ಲವೊ ಅದನ್ನು ತಮ್ಮ ಸೊಸೆಯಿಂದ ನೆರವೇರಿಸುವ ಪ್ರಯತ್ನ ಮಾಡಿದಂತಿದೆ. ನಾಗವೇಣಿಯವರೇ ಸಂಸ್ಕಾರ ಪಡೆದಂತಹ ಕುಟುಂಬದಿಂದ ಬಂದ ತಾನು ಯಾವುದೇ ಕಾರಣಕ್ಕೂ ತನ್ನ ತವರು ಮನೆಗೆ ಹೋಗಬಾರದೆಂದು ನಿರ್ಧರಿಸಿ ತನ್ನ ಮಾವನ ಮನೆಯಲ್ಲಿಯೇ ಉಳಿದುಕೊಂಡು ಜೀವನ ನಡೆಸುವ ನಿರ್ಧಾರ ಮಾಡಿದ್ದಾಳೆ. ಗಂಡು ಮಗು ಬೇಕು ಎಂದು ಪರಿತಪಿಸುತ್ತಿದ್ದ ರಾಮೈತಾಳರು ತಮ್ಮಮಗನ ದುಷ್ಟ ವರ್ತನೆಗಳಿಗೆ ಮನಸೋತು, ನಾಗವೇಣಿ ಮೈಗೂಡಿಸಿಕೊಂಡಿದ್ದ ನಡವಳಿಕೆಗಳಿಗೆ ಮಾರುಹೋಗಿ ನೀನಾದರೂ ಗಂಡು ಮಗುವಾಗಿದ್ದರೆ ಸರಿ ಆಗುತ್ತಿತ್ತು ಎಂಬ ಆತಂಕಪಟ್ಟಂತಿದೆ.

ಒಟ್ಟಿನಲ್ಲಿ ಇವರ ಸಂಬಂಧದ ಮೂಲಕ ಲೇಖಕರು ಸಮಾಜಕ್ಕೆ ಒಳ್ಳೆಯ ಆದರ್ಶಗಳನ್ನು ನೀಡಿದ್ದಾರೆ. ಕಾರಂತರು ಜೀವನ ಮೌಲ್ಯದ ಗಟ್ಟಿಯಾದ ನೆಲೆಯೊಂದನ್ನು ಗುರುತಿಸಿಕೊಂಡಿದ್ದಾರೆ. ಹೆಣ್ಣು ಪುರುಷದ್ವೇಶಿಯಾಗಿಯೋ ಕುಟುಂಬನಾಶಿಯಾಗಿಯೋ ನಡೆದುಕೊಳ್ಳಬೇಕು ಎಂಬುದೇನಿಲ್ಲ. ತನ್ನ ಆತ್ಮಾಭಿಮಾನಕ್ಕೆ ಕುಂದುಂಟಾಗದಂತೆ ಅದರೊಂದಿಗೆ ಕುಟುಂಬದ ಸೌಹಾರ್ದತೆ ಹಾಳಾಗದಂತೆ ಕಾಯ್ದುಕೊಳ್ಳುವ ಪ್ರಯತ್ನವನ್ನು ಮಾಡುತ್ತಾಳೆ. ವೈಯಕ್ತಿಕವಾಗಿ ತನಗಾಗಿ ಅಥವಾ ನಿರ್ದಿಷ್ಟ ವ್ಯಕ್ತಿಗಳ ಪರವಾಗಿ ಅನ್ಯಾಯಗಳು ಎದುರಾದರೂ ಕೂಡ ತಮ್ಮ ವಿರೋಧವನ್ನು ವ್ಯಕ್ತಪಡಿಸುವ ಸಂದರ್ಭಗಳು ಕಾದಂಬರಿಯಲ್ಲಿ ಎಲ್ಲೂ

ಕಾಣುವುದಿಲ್ಲ. ಅಂದರೆ ಪುರುಷರು ಹಾಕಿದ ಮಾರ್ಗದಲ್ಲೇ ನಡೆಯಬೇಕಾದ ಸಂದರ್ಭವೇ ಉಚಿತವೆಂದು ನಂಬಿ ಮೌನವಾಗಿ ತಮ್ಮ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ.

ಮತ್ತೊಂದು ಪ್ರಮುಖವಾದ ವಿಚಾರವೆಂದರೆ ಕಾದಂಬರಿಯಲ್ಲಿ ಬರುವ ಪಾರೋತಿ, ಸರಸೋತಿ, ನಾಗವೇಣಿ ಮುಂತಾದವರು ದುರ್ಬಲರ ಪರವಾಗಿ ಉದಾರವಾದ ಮನೋಭಾವನೆಯನ್ನು ವ್ಯಕ್ತಪಡಿಸುವ ಪ್ರಸಂಗಗಳು ಕಾಣುತ್ತದೆ. ಸೂರ ಮತ್ತು ಆತನ ಹೆಂಡತಿ, ಆತನ ಮಕ್ಕಳಿಗೆ ಉದಾರತೆಯನ್ನು ಅಲ್ಲಲ್ಲಿ ತೋರಿಸಿದ್ದಾರೆ.

ಸಮಾಜ ಎಂದರೆ ಗಂಡು ಅಥವಾ ಪುರುಷರು ಮಾತ್ರ ಎಂಬಂತೆ ಚಿತ್ರಿಸುತ್ತಾ ಬಂದಿರುವುದು ಹಿಂದಿನಿಂದಲೂ ತಿಳಿದ ಸಂಗತಿಯಾಗಿದೆ. ಮನುಷ್ಯನ ಬದುಕು ಸುಖ, ಶಾಂತಿ, ಸಮಾಧಾನಗಳಿಂದ ಸಮೃದ್ಧವಾಗಿರುವುದು ಹೇಗೆ ಎಂಬ ಆಲೋಚನೆಯೋ, ಗಂಡಸಿನ ಬದುಕನ್ನಷ್ಟೇ ಗಮನಿಸಲಾಗಿದೆಯೆಂದಷ್ಟೇ ಅಲ್ಲದೆ ಇವನ ಇಂಥಾ ಬದುಕಿಗಾಗಿ ಹೆಣ್ಣಿನ ಬದುಕು ಹೇಗೆ ನೆರವಾಗುತ್ತದೆ ಎಂಬುದನ್ನು ರಾಮೈತಾಳ, ಸರಸೋತಿಯರ ಸಂದರ್ಭಗಳಲ್ಲಿಯೆ ನಾವು ಗ್ರಹಿಸಬಹುದು ಎಂದು ಭಾವಿಸುತ್ತೇನೆ. ಕಾದಂಬರಿಯಲ್ಲಿ ಬರುವ ಸ್ತ್ರೀಯರು ಬಹಳ ಸೌಮ್ಯವಾಗಿಯೇ ತಮ್ಮ ಪಾಲಿಗೆ ಬಂದ ಕಷ್ಟಗಳನ್ನು ಸಹಿಸಿಕೊಳ್ಳುತ್ತಾ, ಪುರುಷರಿಗೆ ಮಾತ್ರ ಎಂದೂ ವಿರೋಧವನ್ನು ವ್ಯಕ್ತಪಡಿಸುವುದಿಲ್ಲ.

ಪುರುಷ ಪ್ರಧಾನ ಸಮಾಜದ ಎದುರು ಹೆಂಗಸರು ಕೋರಿಕೆ, ಅಹವಾಲುಗಳನ್ನು ಸಲ್ಲಿಸತೊಡಗಿದರು. ಪುರುಷರು ಮಹಿಳೆಯರನ್ನು ಉದಾರವಾಗಿ ನಡೆಸಿಕೊಂಡರೆ ಮಾತ್ರ ಆ ಕುಟುಂಬ ಅಥವಾ ಸಂಸಾರ ಶಾಶ್ವತವಾಗಿ ಉಳಿದುಕೊಳ್ಳುತ್ತವೆ. ಅವರಿಬ್ಬರಲ್ಲಿ ಯಾರಾದರೊಬ್ಬರು ತಿರುಗಿ ಬಿದ್ದರೆ ಅವರ ಮನೆತನದ ಗೌರವ, ಕೀರ್ತಿ ಹಾಳಾಗುತ್ತದೆ. ಹಾಗೆ ಹಾಳಾಗದಂತೆ ಹಿಂದಿನಿಂದಲೂ ತಮ್ಮ ಕುಟುಂಬಕ್ಕೆ ಬಂದಂತಹ ಪ್ರಸಿದ್ಧಿಯನ್ನು ಕೀರ್ತಿಯನ್ನು ಅಭಿವ್ಯಕ್ತಪಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಪುರುಷರಿಂದ ಸ್ತ್ರೀಯರಿಗೆ ಯಾವುದೇ ತರಹದ ಶೋಷಣೆಗೆ ಒಳಗಾಗುವ ಸಂಬಂಧಗಳು ಈ ಕಾದಂಬರಿಯಲ್ಲಿ ಚಿತ್ರಿತವಾಗಿಲ್ಲ. ಅಲ್ಲದೆ ಅದಕ್ಕೆ ಲೇಖಕರು ಎಲ್ಲೂ ಅವಕಾಶವನ್ನೂ ನೀಡಿಲ್ಲ. ಪುರುಷರಿಗಿಂತ ಮಹಿಳೆಯರ ಬಗ್ಗೆ ಅನುಕಂಪ, ಕರುಣೆಯನ್ನು ತೋರಿಸುತ್ತಾ, ಮಹಿಳೆಯರ ಪರವಾದ ನಿಲುವುಗಳನ್ನು ಸಹಜವಾಗಿ ಹೇಳಿದ್ದಾರೆ.

ಕುಟುಂಬದ ಪ್ರಗತಿ ಎಂದರೆ ಪುರುಷ ಪ್ರಗತಿ ಎಂಬ ಅರ್ಥದಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಆದರೆ ಈ ಪ್ರಗತಿಯಲ್ಲಿ ಹೆಣ್ಣಿನ ಭಾಗವಹಿಸುವಿಕೆಯ ಪಾತ್ರ ಹೇಗಿದೆ ಎಂಬುದನ್ನು ಕಾದಂಬರಿಕಾರರು ಚಿತ್ರಿಸಿರುವುದನ್ನು ಪುರುಷ ಮತ್ತು ಸ್ತ್ರೀಯರ ನೆಲೆಯಲ್ಲಿಯೆ ಅಧ್ಯಯನ ಮಾಡಿದಾಗ ಅದರ ಅರ್ಥ ತಿಳಿಯುತ್ತದೆ.

ಆದರ್ಶ ನಾರಿಯ ಕಲ್ಪನೆಯ ಬೇಲಿಗಳು ಒಂದಿಷ್ಟು ಸಡಿಲಗೊಳ್ಳದೆ ಹಾಗೇ ತಮ್ಮ ಆದರ್ಶವನ್ನು ಉಳಿಸಿಕೊಳ್ಳುತ್ತಾ, ಕಾಪಾಡಿಕೊಳ್ಳುತ್ತಾ ಬಂದಿದ್ದಾರೆ. ಮಹಿಳೆಯು ಎಷ್ಟೇ ಏನೇ ಸಾಧಿಸಿದರೂ ಅವಳ ಮುಖ್ಯ ಕಾರ್ಯಕ್ಷೇತ್ರ ಎಂದಿಗೂ ಮನೆಯೇ ಆಗಿರಬೇಕು. ಆ ವಲಯವೇ ಅವಳ ಜೀವನದ ಮುಖ್ಯ ಕಾರ್ಯಕ್ಷೇತ್ರವಾಗಬೇಕು. ಆದರೆ ಗಂಡಸರಿಗೆ ಮಾತ್ರ ಎಂದಿಗೂ ಮನೆಯೇ ಅವರ ಕಾರ್ಯಕ್ಷೇತ್ರವಾಗಿರಬೇಕಾಗಿಲ್ಲ. ಹೊರಗೂ ಅವರ ಕಾರ್ಯವನ್ನು ವಿಸ್ತರಿಸಿಕೊಳ್ಳಬಹುದು. ಹಲವಾರು ಬಗೆಯ ಪುರುಷ ಸಂಬಂಧವನ್ನು ನಿರಾಕರಿಸಿ ಒಟ್ಟು ವ್ಯವಸ್ಥೆಯಿಂದ ದೂರವಿರುವಂತಹ ಪ್ರಯತ್ನಗಳನ್ನು ಮಾಡುವ ಅವಕಾಶ ಹೆಣ್ಣಿಗೆ ಬಂದರೂ ಆ ತರಹದ ಸಾಹಸಕ್ಕೆ ಅವರು ಕೈ ಹಾಕದೆ, ಸಂಪ್ರದಾಯವನ್ನು ಅನುಸರಿಸುತ್ತಾ ತಮ್ಮ ಪಾಡಿಗೆ ಇರುವ ಪ್ರಯತ್ನ ಮಾಡಿದರು. ಲೈಂಗಿಕತೆ ಹಾಗೂ ತಾಯ್ತನಗಳು ಹೆಣ್ಣಿನ ಬದುಕಿನಲ್ಲಿ ಅನಿವಾರ್ಯದ ಅಗತ್ಯಗಳೇ ಹೌದಾದರೂ ಈ ಅಗತ್ಯತೆಗಳನ್ನು ಬಲಿಕೊಟ್ಟಾದರೂ ಸರಿಯೇ ಪುರುಷ ಸಂಬಂಧಗಳನ್ನು ನಿರಾಕರಿಸಿಬಿಡಬೇಕು ಎನ್ನುವಂತಹ ಪ್ರಯತ್ನವನ್ನು ನಾಗವೇಣಿ ಜೀವನದಲ್ಲಿ ಬಹಳ ಸೂಕ್ಷ್ಮವಾಗಿ ಗುರುತಿಸಬಹುದು ಎಂದು ಭಾವಿಸುತ್ತೇನೆ. ಅಲ್ಲದೆ ತನ್ನ ಜನ್ಮವೇ ಅಪಮೌಲ್ಯಕ್ಕೆ ಒಳಗಾಗಿದೆ ಎಂದು ದುಃಖಿಸುತ್ತಾಳೆ.

ಪಿತೃ ಪ್ರಧಾನತೆಗೆ ಪ್ರತಿರೋಧವನ್ನು ಪುರುಷ ಸಂಬಂಧಗಳಲ್ಲಿ ಕಾಣಬಹುದು. ಕಾದಂಬರಿಯ ಉದ್ದಕ್ಕೂ ಪಿತೃ ಪ್ರಧಾನತೆ ವಿರೋಧವನ್ನು ಸೂಚಿಸುವ ಸ್ತ್ರೀ ಸಂಬಂಧವನ್ನು ಕಾಣುವುದಕ್ಕೆ ಸಾಧ್ಯವಾಗುವುದಿಲ್ಲ. ಏನೇ ಕಷ್ಟ ಬಂದರೂ ಅದನ್ನು ಸಹಿಸಿಕೊಳ್ಳುತ್ತಾ ತಮ್ಮ ಕೋಟೆಯ ಒಳಗಡೆಯೇ ಬದುಕು ಸವೆಸಬೇಕಾದ ಅನಿವಾರ್ಯತೆ ಇರುವುದು ಕಂಡುಬರುತ್ತದೆ. ಕಾದಂಬರಿಯ ಅಧ್ಯಯನದ ಉದ್ದಕ್ಕೂ ಹೆಂಗಸರನ್ನು ಗಂಡಸರ ಕಾಮವನ್ನು ಪೂರೈಸುವ ಪರಿಕರಗಳೆಂದು ಪರಿಭಾವಿಸುವ ಪ್ರಸಂಗಗಳು ಎದುರಾಗುವುದೇ ಇಲ್ಲ.

ಹೆಣ್ಣಿಗೆ ಹೆಣ್ಣು ಒತ್ತಾಸೆಯಾಗಿ ನಿಂತಾಗ ಇಡೀ ಕುಟುಂಬವೇ ಶಕ್ತಿಯುತವಾಗಿ ಬೆಳೆದುಬಿಡುವ ಸಾಧ್ಯತೆ ಕಾದಂಬರಿಯಲ್ಲಿ ನಿಚ್ಚಳವಾಗಿ ಬಂದಿದೆ. ರಾಮೈತಾಳರು ಪರಂಪರಾನುಗತವಾಗಿ ಬಂದಿರುವ ಕೆಲಸಗಳಲ್ಲಿ ನಿರತರಾದಾಗ ಇಡೀ ಕುಟುಂಬವನ್ನು ನಿರ್ವಹಿಸುವ ಜವಾಬ್ದಾರಿ ಪಾರೋತಿ, ಸರಸೋತಿಯರ ಮೇಲೆಯೇ ನಿಂತಿದೆ. ಅಲ್ಲದೆ ಅವರು ಕೃಷಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಇಡೀ ಕುಟುಂಬ ಬಲಯುತವಾಗಿ ಬೆಳೆಸಲು ಬಹಳಷ್ಟು ಶ್ರಮಿಸಿದ್ದಾರೆ. ಕಾದಂಬರಿಯಲ್ಲಿ ಇನ್ನೊಂದು ಪ್ರಮುಖವಾದ ವಿಚಾರವನ್ನು ಈ ಸಂದರ್ಭದಲ್ಲಿ ಪ್ರಸ್ತಾಪಿಸುವುದು ಉಚಿತವೆನಿಸುತ್ತದೆ. ಹೆಣ್ಣಿಗೆ ಹೆಣ್ಣೇ ಶತ್ರು ಎಂಬಂತಹ ಆಲೋಚನೆಯನ್ನು ಎಲ್ಲಿಯೂ ಕೃತಿಕಾರರು ಪ್ರಸ್ತಾಪಿಸಿಯೇ ಇಲ್ಲ.

ಸಾಮಾಜಿಕ ಅಸಮಾನತೆಗಳು ಸಮಾಜದಲ್ಲಿ ಕಾಣಿಸಿಕೊಳ್ಳುವುದು ಸಹಜ. ಆದರೆ ಬಡತನದ ಕಾರಣವಾಗಿ, ಕೆಳಜಾತಿಯಲ್ಲಿ ಹುಟ್ಟಿದ ಕಾರಣವಾಗಿ ಅಸಹಾಯಕ ದೈನ್ಯದ ಬದುಕನ್ನು ನಡೆಸಬೇಕಾಗಿ ಬರುವ ಕುಟುಂಬಗಳಿಗೆ ಮಾನವೀಯತೆಯಿಂದ ಸಹಾಯ ಮಾಡುವ ಗುಣವನ್ನು ರಾಮೈತಾಳ ಮತ್ತು ಅವರ ಕುಟುಂಬ ವರ್ಗದವರಿಂದ ಗ್ರಹಿಸಬಹುದಾಗಿದೆ.

ವಿವಾಹ, ಕುಟುಂಬ, ಮನೆಗಳೆಂಬ ಚೌಕಟ್ಟನ್ನು ಒಂದೇ ಸೂರಿನಡಿ ಪುರುಷನ ಆಶ್ರಯದಲ್ಲೇ ಬದುಕಬೇಕಾದ ಸಂದರ್ಭಗಳು ಕಾದಂಬರಿಯಲ್ಲಿ ವ್ಯಕ್ತವಾಗಿವೆ. ಹೀಗೆ ಒಂದೇ ಸೂರಿನಡಿ ಜೀವಿಸುವಾಗ ಹೆಂಗಸರ ದೈಹಿಕ ದುಡಿಮೆ ಹಾಗೂ ಸಂತಾನೋತ್ಪತ್ತಿಯ ದುಡಿಮೆಗಳೆರಡು ನಿರ್ಲಕ್ಷ್ಯಕ್ಕೆ ಗುರಿಯಾಗಿವೆ. ಜೊತೆಗೆ ವಂಶದ ಮುಂದುವರಿಕೆ ಹೆಣ್ಣು ತಲೆಮಾರಿನಲ್ಲೇ ಆದರೂ ಮನೆತನದ ಅಧಿಕಾರ ಮಾತ್ರ ಗಂಡುಮಕ್ಕಳಲ್ಲೇ ಕೇಂದ್ರೀಕೃತವಾಗಿದೆ. ಹೆಂಗಸು ಅಧಿಕಾರದ ಮಾಧ್ಯಮವೇ ಹೊರತು ಅದರ ವಾರಸುದಾರಳಲ್ಲ. ಸಾಮಾಜಿಕ ಅಧಿಕಾರ ಯಾವಾಗಲೂ ಪುರುಷನದೇ ಎಂದು ಗ್ರಹಿಸಬಹುದು. ಯಾವಾಗಲೂ ಗಂಡಸರು ತಾನೇ ಪ್ರಧಾನ ಸಾಮಗ್ರಿಯೆಂದು ಹೆಣ್ಣು ಒಂದು ಪರಿಕರವೆಂದು ಹೇಳುತ್ತಾ ಅವಳನ್ನು ಗುಲಾಮಳನ್ನಾಗಿ ಮಾಡಿಕೊಂಡಿದ್ದಾರೆ. ಅಲ್ಲದೆ ತನ್ನ ಕನಸುಗಳು ಸಾಕಾರಗೊಳ್ಳಬೇಕೆಂದರೆ ಹೆಂಗಸಿನ ಅಗತ್ಯವಿದೆ ಎಂಬ ವಿಷಯವನ್ನು ಗಂಡಸು ಮರೆತಂತೆ ಭಾಸವಾಗುತ್ತದೆ. ಹೆಂಗಸು, ಗಂಡು ಜಾತಿಗೆ ಪೂರಕವಾಗಿ ಕೆಲಸ ನಿರ್ವಹಿಸಬೇಕು. ಕುಟುಂಬ ಸೃಷ್ಟಿಸುವ ಒತ್ತಡಗಳಲ್ಲಿ ಸಿಲುಕಿದ ಹೆಣ್ಣಿಗೆ ಅಥವಾ ಹೆಂಗಸಿಗೆ ಸಹಜೀವಿಯಾಗಿ ಗಂಡಸಿನೊಂದಿಗೆ ಸಮಾನ ನೆಲೆಯಲ್ಲಿ ನಿಲ್ಲುವುದು ಅಸಾಧ್ಯವಾಗಿ ಅವಳು ತನ್ನ ಅಸ್ತಿತ್ವವನ್ನು ಮರೆತು ಅವನಿಗೆ ಸಹಾಯಕಳಾಗಿ ಜೀವನವನ್ನು ಸವೆಸುವ, ಪುರುಷನ ಬದುಕಿಗೆ ಸಮರ್ಥ ಸೇವಕಿಯಾಗಿ ಬದುಕುವ, ಅಪ್ಪನ ಮಗಳಾಗಿ, ಗಂಡನ ಹೆಂಡತಿಯಾಗಿ, ಮಗನ ತಾಯಿಯಾಗಿ ಅವಳ ಬದುಕು ಸಾಗುತ್ತದೆ. ಜೊತೆಗೆ ಇಲ್ಲಿ ಹೆಂಗಸರು

ಪಾಪ ಪ್ರಜ್ಞೆಯಿಂದ ನಿರಂತರವಾಗಿ ಬಳಲಿಸಿದ ಹಾಗೆ ಕಂಡುಬರುತ್ತದೆ. ಧರ್ಮವಂತೂ ಹಿಂದಿನಿಂದಲೂ ಖಚಿತವಾಗಿಯೇ ಹೆಣ್ಣನ್ನು ಗಂಡಿನ ಅಧೀನಕ್ಕೊಳಪಡಿಸಿದೆ. ವಿವಾಹದ ನಿಯಮಾವಳಿಗಳು ಹೆಣ್ಣನ್ನು ಮೂಲತ: ನಿರ್ಗತಿಕಳನ್ನಾಗಿಯೇ ಕಲ್ಪಿಸುತ್ತವೆ. ವಿವಾಹದ ಮೊದಲಾಗಲೀ, ವಿವಾಹದಲ್ಲಾಗಲೀ ಯಾವಾಗಲೂ ಅವಳಿಗೆ ತನ್ನದು ಎಂಬ ನೆಲೆ ಇಲ್ಲವೇ ಇಲ್ಲ. ಆದರೆ ಗಂಡಸಿಗೆ ಮಾತ್ರ ಯಾವಾಗಲೂ ಒಂದು ಶಾಶ್ವತವಾದ ನೆಲೆಯಿರುತ್ತದೆ.

ಬಿ. ಎನ್. ಸುಮಿತ್ರ ಬಾಯಿಯವರು ವಿಶೇಷವಾಗಿ ಹೆಣ್ಣಿನ ಬಗ್ಗೆ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ. "ಇಷ್ಟೆಲ್ಲ ಸ್ತ್ರೀ ಸಮುದಾಯದ ಸಮಸ್ಯೆಗಳಿಗೆ ಆದ್ಯತೆ ನೀಡಿದ ಕಾರಂತರು ಅವುಗಳ ಕಾರಣ ಪರಿಹಾರ ವಿವೇಚನೆಗೆ ಯತ್ನಿಸಿರುವ ಬಗೆ ಹೇಗೆ ಎಂಬುದನ್ನು ಗಮನಿಸಬೇಕು. ಸ್ತ್ರೀಯರ ಶಿಕ್ಷಣದ ಹೆಚ್ಚಳ, ಉದ್ಯೋಗಾವಕಾಶಗಳಿಂದ ದೊರೆಯುವ ಆತ್ಮ ವಿಶ್ವಾಸವನ್ನು ಅವರು ಗುರುತಿಸುತ್ತಾರೆ. ಆದರೆ ಈ ಆತ್ಮ ವಿಶ್ವಾಸದ ಜೊತೆಗೆ ಆಂತರಿಕ ತೊಳಲಾಟ, ಗೊಂದಲ, ಅಸ್ಥಿರತೆ, ಭದ್ರತೆಯ ಹಂಬಲಗಳೂ ತಲೆ ಹಾಕುವುದನ್ನು ಗುರುತಿಸುತ್ತಾರೆ"೯. ಹೀಗಾಗಿ ಕಾರಂತರು ವ್ಯಕ್ತಿಗತ ನೆಲೆಯಲ್ಲಿ ಸ್ತ್ರೀ ಪಾತ್ರಗಳ ಭಿನ್ನ ಆಲೋಚನಾ ಕ್ರಮ, ಹೊಂದಾಣಿಕೆಯ ಬದುಕು, ತಾವು ನಂಬಿರುವ ವ್ಯವಸ್ಥೆಯ ಸ್ವರೂಪದಲ್ಲಿಯೇ ವಿವೇಚನೆ ನಡೆಸುವ ವಿಧಾನ "ಮರಳಿ ಮಣ್ಣಿಗೆ"ಯನ್ನು ವಿಶಿಷ್ಟವಾಗಿಸಿದೆ. ಕಾದಂಬರಿಯಲ್ಲಿ ವ್ಯಕ್ತವಾಗಿರುವ ಗಂಡು ಹೆಣ್ಣಿನ ಚಿತ್ರಣವು ಈ ಮೇಲಿನ ಅಭಿಪ್ರಾಯಕ್ಕೆ ಪೂರಕವಾಗಿವೆ ಎಂದು ಸಹ ನಾನು ಭಾವಿಸಿದ್ದೇನೆ.



## ಅಡಿ ಟಿಪ್ಪಣಿಗಳು

೧. ಶಿವರಾಮ ಕಾರಂತ: ಮರಳಿ ಮಣ್ಣಿಗೆ
ಎಸ್.ಬಿ.ಎಸ್.ಪಬ್ಲಿಷರ್ಸ್ ಮತ್ತು ಡಿಸ್ಟ್ರಿಬ್ಯೂಟರ್ಸ್ ೧೯೯೦
ಸಾಲಿಗ್ರಾಮ, ದ.ಕ. ಪುಟ-೧೧.

೨. ಅದೇ ಪುಟ-೧೧:

೩ ಅದೇ ಪುಟ-೧೨

೪. ಟಿ. ಪಿ. ಅಶೋಕ: (ಸಂ) ಕನ್ನಡ ಸಾಹಿತ್ಯ ಈ ಶತಮಾನದ ನೋಟ'
ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ಪ್ರಸಾರಾಂಗ ೧೯೯೩,
ಪುಟ-೪೭.

೫. ಡಾ. ಜಿ. ಎಸ್. ಶಿವರುದ್ರಪ್ಪ: (ಸಂ) ಕಾದಂಬರಿಕಾರರಾಗಿ ಕಾರಂತ
ಪ್ರಸಾರಾಂಗ, ಬೆಂಗಳೂರು ವಿಶ್ವ ವಿದ್ಯಾಲಯ ಬೆಂಗಳೂರು
೧೯೯೮೩, ಪುಟ-೯೭.

೬. ಶಿವರಾಮ ಕಾರಂತ: ಮರಳಿ ಮಣ್ಣಿಗೆ
ಎಸ್.ಬಿ.ಎಸ್.ಪಬ್ಲಿಷರ್ಸ್ ಮತ್ತು ಡಿಸ್ಟ್ರಿಬ್ಯೂಟರ್ಸ್ ೧೯೯೦
ಸಾಲಿಗ್ರಾಮ, ದ.ಕ. ಪುಟ-೨೧೦.

೭. ಅದೇ ಪುಟ-೨೧೦.

೮. ಟಿ. ಪಿ. ಅಶೋಕ: (ಸಂ) ಕನ್ನಡ ಸಾಹಿತ್ಯ ಈ ಶತಮಾನದ ನೋಟ'
ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ಪ್ರಸಾರಾಂಗ ೧೯೯೩,
ಪುಟ-೫೩.

೯. ಅದೇ ಪುಟ-೫೩.

★★★★★★★★

## ಅಧ್ಯಾಯ: ೪

## ಪ್ರಾದೇಶಿಕತೆಯ ಪ್ರತಿನಿಧೀಕರಣ

ಕಾರಂತರದು ವಿಶಿಷ್ಠ ಪ್ರತಿಭೆ. ಅವರು ಒಟ್ಟಾರೆಯಾಗಿ ಕನ್ನಡ ಸಂದರ್ಭದಲ್ಲಿ ದೈತ್ಯ ಪ್ರತಿಭೆ ಹೇಗೋ ಹಾಗೆ ಕಾದಂಬರಿ ಕ್ಷೇತ್ರದಲ್ಲೂ ಅವರ ಸೃಜನಶೀಲ ಪ್ರತಿಭೆ ಪೂರ್ಣಾರ್ಥದಲ್ಲಿ ತನ್ನನ್ನು ತಾನು ತೆತ್ತುಕೊಂಡಿರುವುದನ್ನು ಕಾಣಬಹುದು. ಒಂದು ಸಂಸ್ಕೃತಿಯು ಒಬ್ಬ ವ್ಯಕ್ತಿಯ ಸೃಜನಶೀಲ ಪ್ರತಿಭೆಯನ್ನು ಅದರೆಲ್ಲ ಸಾಧ್ಯತೆಯಲ್ಲಿ ದುಡಿಸಿಕೊಳ್ಳುವುದು ಕಾದಂಬರಿ ಮಾಧ್ಯಮದಲ್ಲಿ. ಕಾರಂತರು ಬದುಕಿನ ದೈನಂದಿನ ಘಟನೆಗಳನ್ನು, ಸನ್ನಿವೇಶಗಳನ್ನು, ಅನುಭವಗಳನ್ನು ತುಂಬ ಅರ್ಥಪೂರ್ಣವಾಗಿ ನಿರೂಪಿಸುವುದರಲ್ಲಿ ಹೆಚ್ಚು ಪ್ರತಿಭೆಯನ್ನು ಪಡೆದುಕೊಂಡಿರುತ್ತಾರೆ. ಒಂದು ಪ್ರದೇಶಕ್ಕೆ ಸೀಮಿತವಾದ ಸಂಸ್ಕೃತಿ, ಆಚರಣೆ, ಉಡುಗೆ-ತೊಡುಗೆ, ಜನಜೀವನ, ಭಾಷೆ ಮುಂತಾದ ವಿಷಯಗಳನ್ನು ಕಾದಂಬರಿಯಲ್ಲಿ ದುಡಿಸಿಕೊಳ್ಳಬೇಕಾದರೆ ಆಯಾ ಪ್ರಾದೇಶಿಕತೆಯಲ್ಲಿ ಅಥವಾ ಪ್ರದೇಶದಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡಾಗ ಮಾತ್ರ ಸಾಧ್ಯ. ಇಂತಹ ಸಾಮರ್ಥ್ಯವನ್ನು ಪಡೆದುಕೊಂಡವರಲ್ಲಿ ಕುವೆಂಪು, ರಾವ್ ಬಹದ್ದೂರ ಮುಂತಾದವರು. ಈ ಸಾಲಿನಲ್ಲಿಯೇ ಅಂತಹ ವಿದ್ವತ್ ಪ್ರತಿಭೆಯನ್ನು ತಮ್ಮ ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡವರು ಶಿವರಾಮ ಕಾರಂತರು.

"ಮರಳಿ ಮಣ್ಣಿಗೆ" ಒಂದು ಪ್ರಾದೇಶಿಕ ಕಾದಂಬರಿ ಎಂಬುದರ ಬಗ್ಗೆ ಡಿ. ಎಲ್. ಎಸ್, ಕೀರ್ತಿನಾಥ ಕುರ್ತುಕೋಟಿ, , ಜಿ. ಎಸ್. ಆಮೂರ ಮುಂತಾದ ಶ್ರೇಷ್ಠ ವಿಮರ್ಶಕರೆಲ್ಲರೂ ಒಮ್ಮತದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಕುರ್ತುಕೋಟಿಯವರು 'ಮರಳಿ ಮಣ್ಣಿಗೆ' ಬಗ್ಗೆ ಬರೆಯುತ್ತಾ "ಪ್ರಾದೇಶಿಕ ಕಾದಂಬರಿಗಳ ವರ್ಗಕ್ಕೆ ಇದನ್ನು ಸುಲಭವಾಗಿ ಸೇರಿಸಬಹುದಾಗಿದ್ದರೂ, ಕಾರಂತರು ಅದರ ಹಿನ್ನೆಲೆಗೆ ಹಬ್ಬಿಸಿದ ಜೀವನ ವಿನ್ಯಾಸದ ಗಹನತೆ ಆಶ್ಚರ್ಯಕರವಾಗಿದೆ."೧ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ಸೂಕ್ತವೆಂದು ಭಾವಿಸಬಹುದು. ಮತ್ತೊಂದು ಕಡೆ ಅವರೇ "ಕತೆಯ ಸರಳವಾದ ಸಾಮಾನ್ಯತೆ, ಭಾವನೆಗಳ ಅಪೂರ್ವ ಸಂಯಮ, ಪಾತ್ರ ರಚನೆಯ ಸಹಜತೆ ಇವೆಲ್ಲವುಗಳಿಗೆ ಸತ್ವವನ್ನು, ತೇಜಸ್ಸನ್ನು, ಪ್ರಾಣವನ್ನು ನೀಡುವ ಪ್ರಾದೇಶಿಕತೆ ಕಾದಂಬರಿಯ ಅವಿನಾಶಿಯಾದ ಗುಣಗಳಾಗಿವೆ"೨ ಈ ಮೇಲಿನ ಅಭಿಪ್ರಾಯ ಕಾದಂಬರಿಯ ಶ್ರೇಷ್ಠತೆಯನ್ನು ಅದರ ಮಹತ್ವವನ್ನು ತೋರಿಸುತ್ತದೆ. ಬಹುಶ: ಕಾದಂಬರಿಯ ಶ್ರೇಷ್ಠತೆಯನ್ನು, ಪ್ರಾದೇಶಿಕತೆಯನ್ನು ಪ್ರತಿನಿಧಿಸುವ ಕ್ರಿಯೆಯಲ್ಲಿಯೇ

ಅರ್ಥೈಸಿಕೊಳ್ಳಲು ಸಾಧ್ಯವಿದೆ. ಸಮುದಾಯದ ಬದುಕನ್ನು ಆ ಪ್ರದೇಶದೊಂದಿಗೆ ತಳುಕು ಹಾಕುವಲ್ಲಿ ಕಾರಂತರ ನೈಪುಣ್ಯತೆ ಅಧ್ಯಯನ ಯೋಗ್ಯವಾದದು.

'ಪ್ರಾದೇಶಿಕ ಕಾದಂಬರಿ' ಎಂದರೆ ಬಹುಶ: "ಯಾವುದೋ ಒಂದು ಪ್ರದೇಶದ (ನಗರ ಪ್ರದೇಶಗಳಲ್ಲಿ) ಜನ ಜೀವನದ ಚಿತ್ರವನ್ನು ಸವಿವರವಾಗಿ ಕೊಡುವ ಕಾದಂಬರಿ ಎಂದು ಭಾವಿಸಬಹುದು".೩ ಎಂದು ಗಿರಡ್ಡಿ ಗೋವಿಂದರಾಜ ರವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅಂದರೆ ಇದು ಒಂದು ಜನಾಂಗದ ಸಂಪೂರ್ಣ ಚಿತ್ರವನ್ನು ಕೊಡಬೇಕಾಗಿರುವುದರಿಂದ ಸಹಜವಾಗಿಯೇ ಇದರ ವಸ್ತು ವೈವಿಧ್ಯದ ವಿಸ್ತಾರ ಹೆಚ್ಚಿಗೆ ಇರಬೇಕಾಗುತ್ತದೆ.

ಕಾರಂತರು ತಮ್ಮ ಎಲ್ಲಾ ಕಾದಂಬರಿಗಳನ್ನು ಅದೇ ಪರಿಸರದಲ್ಲಿ ಬರೆದರೂ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಬರುವ ಪಾತ್ರಗಳು ಹೆಚ್ಚು ಪ್ರಾದೇಶಿಕತೆಗೆ ಅಂಟಿಕೊಂಡು ಇಡೀ ಜನಾಂಗದ ಪ್ರತಿನಿಧಿಗಳಾಗುತ್ತಾರೆ. ಪ್ರಕೃತಿಯೊಂದಿಗಿನ ಮಾನವನ ಹೋರಾಟ, ಕರಾವಳಿಯ ಜನ ಜೀವನದ ಒಟ್ಟು ಹೋರಾಟವನ್ನು ಪ್ರತಿನಿಧಿಸುತ್ತದೆ. ಆದರೆ 'ಬೆಟ್ಟದ ಜೀವ' ಕಾದಂಬರಿಯಲ್ಲಿ ಬರುವ ಕೆಲವು ಪಾತ್ರಗಳು ಇಡೀ ಜನಾಂಗವನ್ನು ಪ್ರತಿನಿಧಿಸದೆ (ಗೋಪಾಲಯ್ಯ) ಅವರ ವೈಯಕ್ತಿಕತೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುತ್ತಾರೆ. 'ಬೆಟ್ಟದ ಜೀವ' ಕಾದಂಬರಿಗೆ ಹೋಲಿಸಿ ನೋಡಿದಾಗ 'ಮರಳಿ ಮಣ್ಣಿಗೆ' ಕಾದಂಬರಿ ಆ ಜನಾಂಗದ ಸಾಮಾಜಿಕ, ಧಾರ್ಮಿಕ ಜೀವನದ ಯಥಾವತ್ತಾದ ವಿವರಗಳನ್ನು ಸವಿಸ್ತಾರವಾಗಿ ಓದುಗರಿಗೆ ತಲುಪಿಸುವುದರಲ್ಲಿ ಸಂಶಯವಿಲ್ಲವೆಂದೇ ಹೇಳಬೇಕಾಗುತ್ತದೆ. ಇದೇ ತರಹದ ಚಿತ್ರಣವನ್ನು ನಾವು 'ಕುವೆಂಪು' ರವರ 'ಮಲೆಗಳಲ್ಲಿ ಮದುಮಗಳು' ರಾವ್ ಬಹದ್ದೂರರ 'ಗ್ರಾಮಾಯಣ' ಕಾದಂಬರಿಗಳಲ್ಲಿ ಕಾಣಬಹುದು.

ಡಾ॥ಎನ್. ಕೆ. ಕೋದಂಡರಾಮ ರವರು ತಮ್ಮ "ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ" ಎಂಬ ಹೆಸರಿನ ಪಿ.ಹೆಚ್‌ಡಿ. ಪ್ರಬಂಧದಲ್ಲಿ "ಈ ಕತೆಯು ಮೂರು ತಲೆಮಾರುಗಳ ಆಶಯಗಳಾದ "ಸ್ಥಿರತೆ", "ಗೊಂದಲ" ಮತ್ತು "ಸ್ಥಿತ್ಯಂತರ"ಗಳ ನೆಲೆಗಳನ್ನು ಆ ಕಾಲಮಾನದ ಪರಿಸರದಲ್ಲಿ ಅಧ್ಯಯನ ಮಾಡುವುದಾಗಿದೆ"೪ ಎಂದಿದ್ದಾರೆ. ಅಂದರೆ ಮೊದಲಿನ ತಲೆಮಾರಿನಲ್ಲಿ ಬರುವ ಸರಸೋತಿ, ಪಾರೋತಿ ಈ ಪಾತ್ರಗಳು ಹೆಚ್ಚು ಮಣ್ಣಿಗೆ ಅಂಟಿಕೊಂಡು ತಮ್ಮ ಜೀವನವನ್ನು ಸವೆಸಿರುತ್ತವೆ. ಸ್ಥಿರವಾಗಿ ಯಾವುದೇ ಆಧುನಿಕ ಪ್ರಕ್ರಿಯೆಗಳಿಗೆ ತಲೆ ಕೆಡಿಸಿಕೊಳ್ಳದೆ ತಾವುಗಳು ತಮ್ಮ ಗೆಯ್ಮೆಯಲ್ಲಿಯೇ ಸುಖವನ್ನು ಕಾಣುತ್ತಾ ಬೇರೆ ಯಾವುದೇ

ವಿಷಯಗಳಿಗೂ ತಲೆ ಕೆಡಿಸಿಕೊಳ್ಳದೆ ತಮ್ಮ ಮನೆತನದ ಗೌರವ, ಕೀರ್ತಿಗಳನ್ನು ಕಾಪಾಡಿಕೊಳ್ಳುತ್ತಾ ಹೋಗುತ್ತಾರೆ. ಅಂದರೆ ಬಹುಶ: ಕಾರಂತರ ಮೇಲೆ ಗಾಂಧೀಜಿಯ ವ್ಯಕ್ತಿತ್ವ ಬೀರಿದ ಪ್ರಭಾವ ತಮ್ಮನ್ನು ಉಳಿಸಿಕೊಳ್ಳುವ ಅದನ್ನು ಅಭಿವೃದ್ಧಿ ಪಡಿಸುವ ಕಾಯಕವೇ ಆಗಿರುತ್ತದೆ. ಕಾದಂಬರಿ ಬರೆದ ಸಮಯ ಸ್ವಾತಂತ್ರ್ಯ ಪೂರ್ವದ್ದಾದ್ದರಿಂದ ಅವರ ಮೇಲೆ ವಸಹಾತುಶಾಹಿಯ ಪ್ರಭಾವ ದಟ್ಟವಾಗಿದೆ. ಮೊದಲಿನ ತಲೆಮಾರಿನ ಪಾತ್ರಗಳಲ್ಲಿ ಹೆಚ್ಚು ಪ್ರಾದೇಶಿಕತೆಯನ್ನು ನೆಚ್ಚಿಕೊಂಡು ಬದುಕುತ್ತಿರುತ್ತಾರೆ. ಆ ತಲೆಮಾರಿನಲ್ಲಿ ಯಾವುದೇ ಆಧುನಿಕತೆಯ ಪ್ರಭಾವವನ್ನು ಗುರುತಿಸುವುದಕ್ಕೆ ಸಾಧ್ಯವಿಲ್ಲ. ಅವರು ಹೇಗೆ ದೇಶೀಯತೆಗೆ ಅಂಟಿಕೊಂಡು ಪ್ರಾದೇಶಿಕತೆಯನ್ನು ಮೆರೆಯುತ್ತಾರೆಂಬುದನ್ನು ಕಾರಂತರೇ ಮರಳಿ ಮಣ್ಣಿಗೆ ಯಲ್ಲಿ "ಅನಂತರ ಯಾರೂ ಬರಲಿ, ಬಾರದಿರಲಿ, ಪಾರೋತಿ ಹೊಲಗೆಲಸಕ್ಕೆ ಹೊರಟಳು, ಹೊರಗೆಲಸ – ಹೊಲಗೆಲಸ – ಎಲ್ಲ ಒಂದೇ"೫ ಅವರಿಗೆ ಅವರ ಕಾಯಕದಲ್ಲಿಯೇ ಚಿಂತೆ. "ಮರಳಿ ಮಣ್ಣಿಗೆಯಂಥ ಕಾದಂಬರಿಗಳು" ನಿತ್ಯ ಜೀವನದ ಕಡು ವಾಸ್ತವಿಕ ವಿವರಗಳನ್ನು ಆ ಐತಿಹಾಸಿಕ ಪ್ರಕ್ರಿಯೆಯ ಮೂಲವನ್ನು ಸ್ಪರ್ಷಿಸುತ್ತವೆ. ಆದರ್ಶ, ಆವೇಶ, ರೊಮ್ಯಾಂಟಿಕ್, ಕನಸುಗಾರಿಕೆಯ ಜಾಗದಲ್ಲಿ ಅಧಿಕೃತ ವಿವರಗಳು ದಟ್ಟವಾಗಿ ವಾಸ್ತವವಾದೀ ಕಾದಂಬರಿಯ ಆರಂಭವನ್ನು ಘೋಷಿಸುತ್ತವೆ. ಅಮೂರ್ತ ಸುಧಾರಣೆಯ ಬದಲು ಪ್ರತಿನಿತ್ಯದ ಜೀವನ ತನ್ನೆಲ್ಲ ಒಳ ವಿನ್ಯಾಸದಲ್ಲಿ ಬಿಚ್ಚಿಕೊಳ್ಳಲು ಪ್ರಾರಂಭಿಸುತ್ತದೆ"೬ ಈ ಮೇಲಿನ ಅಭಿಪ್ರಾಯವು ಹೆಚ್ಚು ಸರಸೋತಿ, ಪಾರೋತಿ, ನಾಗವೇಣಿಯರ ಪಾತ್ರಗಳಿಗೆ ಸಮಂಜಸವೆಂದು ತೋರುತ್ತದೆ.

ಏಕೆಂದರೆ ತಮ್ಮ ನಿತ್ಯ ಜೀವನವೆಲ್ಲವು ಕಡು ವಾಸ್ತವಾಂಶಗಳಲ್ಲಿಯೇ ಸಾಗುತ್ತಿರುತ್ತದೆ. ಮತ್ತು ಯಾವ ಸುಧಾರಣೆಯನ್ನು ಬಯಸದೆ ತಮ್ಮ ಮಣ್ಣಿನಲ್ಲಿಯೇ ನಿಂತು ಆದರ್ಶತೆಯನ್ನು ಮೆರೆಯುತ್ತಾ ಪರಂಪರೆಯಿಂದ ಬಂದ ಸಂಸ್ಕೃತಿಯನ್ನು ಕಾಪಾಡಿಕೊಳ್ಳುತ್ತಾ, ಸಾಂಪ್ರದಾಯಿಕ ಗ್ರಾಮೀಣ ಜೀವನ ನಡೆಸುತ್ತಾರೆ. ಅಂದರೆ ಅವರ ಜೀವನದಲ್ಲಿ ನಾವು ಯಾವ ಸುಧಾರಣೆಯನ್ನು ಕಾಣಲು ಸಾಧ್ಯವಿಲ್ಲದಿರುವುದನ್ನು ಅಧ್ಯಯನದಿಂದ ಕಂಡುಕೊಳ್ಳಬಹುದು. ಇದರರ್ಥ ಪ್ರಾದೇಶಿಕತೆಯನ್ನು ಸಾಧ್ಯವಿಲ್ಲದಿರುವುದನ್ನು ಅಧ್ಯಯನದಿಂದ ಕಂಡುಕೊಳ್ಳಬಹುದು. ಇದರರ್ಥ ಪ್ರಾದೇಶಿಕತೆಯನ್ನು ಉಳಿಸುವುದೇ ಎಂದು. ಸರಸೋತಿ, ಪಾರೋತಿ, ರಾಮೈತಾಳರ ಹೋರಾಟದ ರೀತಿಯನ್ನು ಗಮನಿಸಿದರೆ ಅವರ ಹೋರಾಟ ವೈಯಕ್ತಿಕ ನೆಲೆಗಟ್ಟಿನ ಮೇಲೆ ಎಂದು ತೋರಬಹುದು. ಅದಕ್ಕಿಂತ ಹೆಚ್ಚಾಗಿ ಪ್ರಾದೇಶಿಕತೆಯನ್ನು ಹೆಚ್ಚು ಪ್ರತಿಬಿಂಬಿಸುತ್ತದೆ. ಇವರಷ್ಟು ಮಣ್ಣಿಗೆ ಅಂಟಿಕೊಂಡು ಜೀವನ ನಡೆಸಿದ ಜೀವಗಳು ಬಹುಶ: ಕಾದಂಬರಿಯಲ್ಲಿ ಮತ್ತೆಲ್ಲಿಯೂ ದೊರೆಯದು.

ಲಚ್ಚ ಮಾತ್ರ ಇಂತಹ ಹೋರಾಟದ ಸುಳಿವಿಗೆ ಸಿಕ್ಕದೆ ತಪ್ಪಿಸಿಕೊಂಡು ದೂರ ಹೋಗುತ್ತಾನೆ. ನಾಗವೇಣಿ ಮಾತ್ರ ಈ ಹೋರಾಟವನ್ನು ಒಂದು ಆಹ್ವಾನವೆಂದು ಸ್ವೀಕರಿಸಿ, ಛಲದಿಂದ ಎದುರಿಸಿ ಬೇರಾವ ಗುಲಾಮಗಿರಿಗೆ ಒಳಗಾಗದೆ ತಾವು ಬಾಳಿ ಬದುಕಿದ ನೆಲದಲ್ಲಿಯೇ ಬದುಕುತ್ತಾಳೆ. ರಾಮ ಮಾತ್ರ ಇಂತಹ ಹೋರಾಟದ ಸಂಸ್ಕೃತಿಯನ್ನು ಅರಗಿಸಿಕೊಂಡು, ಎಷ್ಟೇ ವಿದ್ಯಾಭ್ಯಾಸವನ್ನು ಪಡೆದುಕೊಂಡರು ಮುಂಬೈ, ಮದ್ರಾಸ್ ಮುಂತಾದ ಕಡೆಗಳಲ್ಲಿ ಅಲೆದರೂ ಪಾಶ್ಚಾತ್ಯ ಸಂಸ್ಕೃತಿಗೆ ಒಳಗಾಗದೆ ಮತ್ತೆ ತನ್ನ ತಾಯ್ನಾಡಿಗೆ ಬಂದು ತನ್ನ ತಾಯಿಯ ಜೊತೆಯಲ್ಲಿಯೇ ಬದುಕುತ್ತಾನೆ.

"ಈ ಪಾತ್ರಗಳ ನಿಲುವು ಒಂದು ದೃಷ್ಟಿಯಿಂದ ಆಯಾ ತಲೆಮಾರಿನಲ್ಲಿ ಭೂಮಿ ಮನುಷ್ಯರ ನಡುವಿನ ಸಂಬಂಧದ ಪ್ರಾತಿನಿಧಿಕ ಚಿತ್ರವಾಗಿದ್ದರೂ, ಆಯಾ ಪಾತ್ರಗಳ ಮನೋಭಾವ ಅವುಗಳಿಗೆ ವೈಯಕ್ತಿಕವಾಗಿದೆ. ಈ ವೈಯಕ್ತಿಕ ಉತ್ಕಟತೆಯಲ್ಲಿ ಹೋರಾಟದ ಧೀರತನದಲ್ಲಿ ಅವು ವೈಯಕ್ತಿಕತೆಯನ್ನು ಮೀರಿ ಹೋಗಿ ಸಾರ್ವತ್ರಿಕವಾಗುತ್ತದೆ"[೭] ಎಂದು ಗಿರಡ್ಡಿ ಗೋವಿಂದ ರಾಜ ಅವರು ಬಹಳ ಅರ್ಥಪೂರ್ಣವಾಗಿ ಗುರುತಿಸುತ್ತಾರೆ.

"ಮರಳಿ ಮಣ್ಣಿಗೆ" ಯಲ್ಲಿ ಅನೇಕ ಸವಿವರವಾದ ಮದುವೆಯ ವರ್ಣನೆಗಳು ಬರುತ್ತವೆ. ಅವು ವಿವರಗಳಲ್ಲಿ ಹೆಚ್ಚಿನ ನಾವೀನ್ಯವನ್ನೇನೂ ತೋರಿಸುವುದಿಲ್ಲವಾದ್ದರಿಂದ ಅವುಗಳಲ್ಲಿ ಒಂದನ್ನು ಸವಿವರವಾಗಿ ವರ್ಣಿಸಿ ಇನ್ನುಳಿದವುಗಳನ್ನು ಚುಟುಕಗೊಳಿಸಬಹುದಾಗಿತ್ತು"[೮] ಎಂದು "ಡಿ. ಎಲ್. ನರಸಿಂಹಾಚಾರ್ಯರು" ಅಭಿಪ್ರಾಯಪಡುತ್ತಾರೆ. ಕಾದಂಬರಿಯ ಆರಂಭವು ಮದುವೆಯ ವರ್ಣನೆಯಿಂದಲೇ ಆರಂಭವಾಗುತ್ತದೆ. ಮೊದಲಿನ ವರ್ಣನೆಯೇ ಪ್ರಾದೇಶಿಕತೆಗೆ ಕನ್ನಡಿ ಹಿಡಿದಂತೆ ಚಿತ್ರಿಸಿದ್ದಾರೆ ಎಂಬುದರಲ್ಲಿ ಸಂಶಯವಿಲ್ಲ. ತದನಂತರ ಬಂದಂತಹ ಮದುವೆಯ ವರ್ಣನೆಗಳು ಅಷ್ಟಾಗಿ ಬೇಕಾಗಿರಲಿಲ್ಲ ಎಂದು ಭಾವಿಸಬಹುದು ಎಷ್ಟೇ ಮದುವೆಗಳು ಬಂದರೂ ಆ ಪ್ರದೇಶದ ವರ್ಣನೆಯನ್ನು ಬಿಟ್ಟು ಬೇರೆ ಪ್ರದೇಶದ ವರ್ಣನೆಯನ್ನು ಚಿತ್ರಿಸುವುದಕ್ಕೆ ಸಾಧ್ಯವಿಲ್ಲ. ಏನೇ ಆಗಲಿ ಮದುವೆಯ ಸಂದರ್ಭದ ವರ್ಣನೆಗಳು ಮಾತ್ರ ಪ್ರಾದೇಶಿಕತೆಯನ್ನು ಪ್ರತಿನಿಧಿಸಿ ಅದನ್ನು ಅಭಿವೃದ್ಧಿಪಡಿಸುತ್ತವೆ ಎಂದು ಹೇಳಬಹುದು.

ಈ ಮದುವೆಯಿಂದ ಒಂದೆಡೆ ಸೇರಿದ ಐತಾಳರು, ಪಾರೋತಿ ಸರಸೋತಿಯರು ಅಷ್ಟೇನೂ ಸಹಾನುಭೂತಿ ಪರವಲ್ಲದ ಪ್ರಕೃತಿಯೊಂದಿಗಿನ ಬದುಕಿನ ಹೋರಾಟದಲ್ಲಿ ಪಾಲ್ಗೊಂಡರೂ ಅವರಿಗೆ ಅದು ವಿಶೇಷವೆಂದು ತೋರದೆ ಅವರಿಗೆ ಆ ಹೋರಾಟ, ಆ ಕೆಲಸ ರಕ್ತಗತವಾಗಿ ಸಂಭವಿಸಿದೆಯೇನೋ ಎಂದು ಭಾಸವಾಗುತ್ತದೆ. ಅಲ್ಲದೆ ಅದು ಅವರ ಪೂರ್ವ

ಜನ್ಮದ ಕರ್ಮದಂತೆ ಅನಿವಾರ್ಯವಾಗಿದೆ. ಅವರ ನಡುವೆ ಆಗಾಗ ವಿರಸ ತಲೆದೋರಿದ್ದರೂ ಗೆಯ್ಮೆ ಅಥವಾ ಹೋರಾಟದಲ್ಲಿ ತಲ್ಲೀನರಾಗಿದ್ದರಿಂದ ಅವರನ್ನು ಒಂದುಗೂಡಿಸಿ ಆ ಪ್ರಾದೇಶಿಕತೆಯ ವಾತಾವರಣದೊಳಗೆ ಹೇಗೆ ಜೀವಿಸುತ್ತಾರೆ ಎಂಬ ವಿವರವನ್ನು ಅಧ್ಯಯನ ಮೂಲಕ ಕಂಡುಕೊಳ್ಳಬಹುದಾಗಿದೆ.

ಸತ್ಯಭಾಮೆ, ಐತಾಳರ ಜೀವನದಲ್ಲಿ ಪ್ರವೇಶ ಮಾಡಿದ ಮೇಲೆ ಈ ಹೋರಾಟಕ್ಕೆ ಮತ್ತೊಂದು ತಿರುವು ಪಡೆದುಕೊಳ್ಳುತ್ತದೆ. ಮನುಷ್ಯ – ಮನುಷ್ಯರ ನಡುವಿನ ಸಂಬಂಧದಲ್ಲಿ ತೊಡಕುಗಳು ಉಂಟಾಗಿ ಹೋರಾಟ ಜಾಸ್ತಿಯಾಗುತ್ತದೆ. ಎಂತಹ ಕಷ್ಟ ಬಂದರೂ ಛಲ ಬಿಡದೆ ಸಂಪ್ರದಾಯವಾಗಿ ಬಂದ ದುಡಿಮೆಯನ್ನು ಬಿಡದೆ ಅದೇ ಪ್ರದೇಶದಲ್ಲಿ ನೆಲೆ ನಿಲ್ಲುವ ಸತ್ಯಭಾಮೆಯ ಹೋರಾಟವು ಎಂತಹವನ್ನಾದರೂ ಮುಗ್ಧರನ್ನಾಗಿಸುತ್ತದೆ. ಲಚ್ಚನ ಕಾರಣದಿಂದಾಗಿ ಮಾತ್ರ ಅವರ ಜೀವನದಲ್ಲಿ ಅಲ್ಲೋಲ ಕಲ್ಲೋಲ ಉಂಟಾಗುತ್ತದೆ. ಲಚ್ಚ ಬರುವತನಕವೂ ಸ್ಥಿರತೆಯಿಂದ ಕೂಡಿದ್ದ ಅವರ ಜೀವನವು ತದನಂತರ ಗೊಂದಲದ ಗೂಡಾಗಿ ಪರಿಣಮಿಸುತ್ತದೆ. ಲಚ್ಚನಿಗೆ ಆಧುನಿಕ ಇಂಗ್ಲೀಷ್ ಶಿಕ್ಷಣ ಕೊಡಿಸಬೇಕೆನ್ನುವ ಮತ್ತು ಮಗ ಲಾಯರಾಗಬೇಕೆನ್ನುವ ರಾಮ ಐತಾಳರ ಹಂಬಲವು ಸತ್ಯವಿರಬಹುದು. ಆದರೆ ಎಲ್ಲೋ ಒಂದು ಕಡೆ ಪಾಶ್ಚಾತ್ಯ ಸಂಸ್ಕೃತಿಗೆ ಒಳಗಾಗುವ ಪ್ರಾದೇಶಿಕತೆಯನ್ನು ಮರೆಯುವ ಹಂತವು ಕಾದಂಬರಿಯಲ್ಲಿ ಅರ್ಥಪೂರ್ಣವಾಗಿ ಕಾರಂತರು ಚಿತ್ರಿಸಿದ್ದಾರೆ.

ಸಂಪ್ರದಾಯವಾಗಿ ಇಂಗ್ಲೀಷ್ ಶಿಕ್ಷಣ ಪಡೆಯುವುದೇ ಪ್ರಾದೇಶಿಕತೆಯನ್ನು ಮೀರಿದ ಹಾಗೆ, ಎಲ್ಲಿ ಇಂಗ್ಲೀಷ್ ಶಿಕ್ಷಣದಿಂದ ನಮ್ಮ ಸಂಪ್ರದಾಯ, ಸಂಸ್ಕೃತಿ ಹಾಳಾಗುವುದೋ ಎಂಬ ಸಂಶಯದಿಂದ ಪಾರೋತಿ ಅವನ ಶಿಕ್ಷಣಕ್ಕೆ ಅಡ್ಡಗಾಲು ಹಾಕಿದರೂ, ಆದರೂ ಆ ವಿಚಾರ ಕೊನೆಯಲ್ಲಿ ಸತ್ಯವಾಗಿ ರೂಪು ತಳೆಯುತ್ತದೆ. ಲಚ್ಚನಿಗೆ ತಂದೆ ಸಂಪಾದಿಸಿದ ಭೂಮಿ ಯಾವುದೂ ಬೇಡವಾಗಿ ಶೀನಮಯ್ಯನ ಮಕ್ಕಳು ಹೇಗೆ ಬೆಂಗಳೂರಿನಲ್ಲಿ ಹೋಟೆಲನ್ನು ಇಟ್ಟು ಹಣ ಸಂಪಾದಿಸುತ್ತಾರೋ ಹಾಗೆ ತಾನು ಆಧುನಿಕತೆಯ ಜೀವನಕ್ಕೆ ಕಾಲಿರಿಸಬೇಕೆಂದು ಯೋಚಿಸಿ ಸಂಪೂರ್ಣವಾಗಿ ನಿಷ್ಫಲನಾಗುತ್ತಾನೆ. ಅಲ್ಲದೆ ಆಧುನಿಕತೆಗೂ ಒಳಗಾಗದೆ, ಪ್ರಾದೇಶಿಕತೆಗೂ ಒಳಗಾಗದೆ ಎಲ್ಲವನ್ನೂ ಕಳೆದುಕೊಂಡು ಪರದೇಶಿಯಾಗುತ್ತಾನೆ. ಅಲ್ಲದೆ ಬೇರೆಯವರ ಜೀವನವು ಸುಖಮಯವಾಗಿರಲು ಬಿಡದೆ ದು:ಖದಿಂದ ಕೂಡಿರುವ ಹಾಗೆ ಮಾಡುತ್ತಾನೆ. ಅಂದರೆ "ವಸಾಹತುಶಾಹೀ ಆಡಳಿತದಿಂದಾಗಿ ಪ್ರವೇಶಿಸಿದ ಹೊಸ ಶಿಕ್ಷಣ ವ್ಯವಸ್ಥೆ ಮತ್ತು ಹೊಸ ಉದ್ಯೋಗಾವಕಾಶಗಳ ಮೂಲಕ ಸ್ಥಿತ್ಯಂತರಗೊಂಡ ಭಾರತೀಯ ಸಮಾಜ ಈ ಶತಮಾನದ

ಆದಿಯಲ್ಲಿ ಹೊಸ ಕಲಾಪ್ರಕಾರಗಳನ್ನೂ ಬರಮಾಡಿಕೊಂಡಿತಷ್ಟೆ"[೯] ಎಂದು ಟಿ. ಪಿ. ಅಶೋಕರು ತಮ್ಮ ಅಭಿಪ್ರಾಯವನ್ನು ಸೂಚಿಸಿದ್ದಾರೆ.

"ಮರಳಿ ಮಣ್ಣಿಗೆ" ಮೂರು ತಲೆಮಾರುಗಳ ಕಥೆಯಲ್ಲಿ ಸಾಮಾಜಿಕ ಬದಲಾವಣೆಯ ಮೂರು ಘಟನೆಗಳೆ ಕಾಣಸಿಗುತ್ತವೆ. ರಾಮೈತಾಳರು ಮೊದಲ ತಲೆಮಾರಿಗೆ ಸೇರಿದವರು. ಇವರ ಜೀವನ ನಡೆಯುವುದು ಹಿರಿಯರಿಂದ ಪರಂಪರೆಯಿಂದ ಬಂದ ಕೃಷಿ ಮತ್ತು ಪೌರೋಹಿತ್ಯಗಳಿಂದ ಅಂದರೆ ಎಲ್ಲಾ ದೃಷ್ಠಿಯಿಂದಲೂ ಇವರದು ಸಾಂಪ್ರದಾಯಿಕ ಗ್ರಾಮೀಣ ಜೀವನ. ಅಂದರೆ ಎಲ್ಲಿಯೂ ಇವರಿಗೆ ಆಧುನಿಕತೆಯ ಸೋಂಕು ತಗುಲದೆ ಇದ್ದು ಆ ಪ್ರಾದೇಶಿಕತೆಯ ನಂಟಿಗೆ ಗಂಟುಬಿದ್ದಿದ್ದಾರೆ. ಶೀನಮಯ್ಯ ಐತಾಳರ ನೆರೆಮನೆಯವ ಇವನು ವೈದಿಕನಲ್ಲ. ಆದ್ದರಿಂದ ಐತಾಳರಷ್ಟು ಪ್ರತಿಷ್ಠಿತನಲ್ಲ. ಆರ್ಥಿಕವಾಗಿ ಇನ್ನಷ್ಟು ಸುಧಾರಿಸುವುದು ಇಬ್ಬರಿಗೂ ಬೇಕು. ಇದಕ್ಕೆ ಕಾರಂತರು ತಮ್ಮ ಕಾದಂಬರಿಯಲ್ಲಿ ಸವಿವರವಾಗಿ ಚಿತ್ರಿಸಿದ್ದಾರೆ. ಅವರ ಜೀವನ ಪರಂಪರೆಯಿಂದ ಕೇವಲ ದತ್ತವಾದದ್ದು, ಬದಲಾವಣೆಯ ಬಿಡುಗಡೆಯ ಎರಿಳಿತಗಳು ಅವರಿಬ್ಬರ ಜೀವನದ ಚೌಕಟ್ಟಿನಲ್ಲಿ ಸೂಚಿತವಾಗುತ್ತಿಲ್ಲ. ಗಂಡಸರಿಗೆ ಊರ ಪಾರುಪತ್ಯವಾದರೂ ಒಂದಿಷ್ಟಿದೆ. ಹೆಂಗಸರ ಜೀವನವೆಂದರೆ ಕಟ್ಟಿದ ಗೂಟ, ಹಾಕಿದ ಹುಲ್ಲು, ಪಾರೋತಿ – ಸರಸೋತಿಯರ ಜೀವನ ಪರಂಪರೆಗೆ ಸೀಮಿತವಾಗಿದೆ. ಗದ್ದೆ ಬೇಸಾಯದಷ್ಟೇ ಇವರೆಲ್ಲರ ಜೀವನದಲ್ಲಿ ಏರು ತಗ್ಗುಗಳು ಉತ್ಕರ್ಷಗಳು ಸ್ಥಿರ ಜೀವನ ಈ ಅಂಶಗಳು ನಮಗೆ ಗೋಚರಿಸುತ್ತವೆ. ಈ ಸೀಮಿತ ಚೌಕಟ್ಟಿನೊಳಗೆ ಜೀವನ ಸಾಗಿಸುತ್ತಿದ್ದರೂ ನೋವು ನಲಿವುಗಳು ಇಲ್ಲವೆಂದು ತೀರ್ಮಾನಿಸಬೇಕಾಗಿಲ್ಲ. ಮದುವೆ, ಗೃಹಪ್ರವೇಶ ಮುಂತಾದ ಸಂದರ್ಭಗಳಲ್ಲಿ ಒಂದಷ್ಟು ಜಗಳ, ಗೊಂದಲ, ಸಂಭ್ರಮ ಇದ್ದೇ ಇದ್ದರೂ ಅವರ ಜೀವನದಲ್ಲಿ ಬದಲಾವಣೆಯನ್ನು ಕಾಣದ ಏಕತಾನದ ಬದುಕು ಮಾತ್ರ ಎಂಬ ಅಂಶವು ಅರಿವಾಗದೆ ಇರದು, ಅಂದರೆ ಪ್ರಾದೇಶಿಕತೆಯ ಒಳಗೆ ಇದ್ದುಕೊಂಡು ಅವೆಲ್ಲವುಗಳನ್ನು ಅನುಭವಿಸುತ್ತಾ ಆದರ್ಶಪ್ರಾಯವಾದ ಜೀವನ ನಡೆಸುತ್ತಾರೆ ಎಂಬ ಅಂಶವು ನಮಗೆ ಈ ಕಾದಂಬರಿಯ ಅಧ್ಯಯನದಿಂದ ಗೋಚರವಾಗುತ್ತದೆ.

ರಾಮೈತಾಳ, ಶೀನಮಯ್ಯರಿಗೆ ಬದಲಾವಣೆಯೇ ಬೇಕಿಲ್ಲ ಎಂದು ನಿರ್ದಾಕ್ಷಿಣ್ಯವಾಗಿ ಹೇಳಲು ಬಾರದು. ಏಕೆಂದರೆ ಕಾದಂಬರಿಯಲ್ಲಿಯೇ ಬದಲಾವಣೆಯ

ಬಗ್ಗೆ ಕೆಲವು ಸೂಚನೆಗಳು ಸಿಗುತ್ತವೆ. ಭತ್ತದ ದರ ಒಂದಷ್ಟು ಹೆಚ್ಚಾದರೆ ಎಂದು ಐತಾಳರ ಆಸೆ. ಮಕ್ಕಳಾಗುತ್ತಿದ್ದಂತೆ ಮಕ್ಕಳು ಬೆಳೆಯುತ್ತಿದ್ದಂತೆ ಮಕ್ಕಳ ಭವಿಷ್ಯ ಕುರಿತ ಯೋಚನೆ ಹೆಚ್ಚಾಗುತ್ತಿದ್ದಂತೆ ಈ ಆಶೋತ್ತರಗಳ ಸ್ವರೂಪ ನಿರ್ದಿಷ್ಟವಾಗುತ್ತದೆ. ಕೋಡಿಹಳ್ಳಿಯಲ್ಲಿ ಬದುಕುತ್ತಿರುವ ಇವರಿಗೆ ಕುಂದಾಪುರ, ಉಡುಪಿ, ಮಂಗಳೂರು, ಮೈಸೂರು, ಬೆಂಗಳೂರು, ಮದ್ರಾಸು, ಮುಂಬಯಿಗಳಲ್ಲಿ ಜೀವನ ಹೇಗೆ ಬದಲಾಗುತ್ತಿದೆ ಎಂಬುದು ಅಸ್ಪಷ್ಟವಾಗಿಯಾದರೂ ಅರಿವಿಗೆ ಬರುತ್ತದೆ. ಸಾಂಪ್ರದಾಯಿಕವಾಗಿ ಅನ್ನದಾನವನ್ನು ಶ್ರೇಷ್ಟದಾನವೆಂದು ನಂಬಿದ ಇವರ ಜನಾಂಗದಲ್ಲೆ ಹಲವಾರು ಪಟ್ಟಣಗಳಲ್ಲಿ ಹೋಟೆಲುಗಳನ್ನು ಸ್ಥಾಪಿಸಿ, ಹೇರಳವಾಗಿ ಹಣ ಸಂಪಾದಿಸುತ್ತಿದ್ದಾರೆ ಎಂಬುದು ಬದಲಾಗುತ್ತಿರುವ, ಸಂಸ್ಕೃತಿ ಮೀರುತ್ತಿರುವ ಅಂಶಗಳು ಸ್ಪಷ್ಟವಾಗಿ ನಮ್ಮ ತಿಳುವಳಿಕೆಗೆ ಬರುತ್ತವೆ. ಎಲ್ಲೋ ಒಂದು ಕಡೆ ಪ್ರಾದೇಶಿಕತೆಯನ್ನು ಬಿಟ್ಟು ಬೇರೊಂದು ಕಡೆಗೆ ಚಿಂತಿಸಿದಂತೆ ಭಾಸವಾಗುತ್ತದೆ. ಹೋಟೆಲುಗಳನ್ನು ಸ್ಥಾಪಿಸಿ ಅತ್ಯಧಿಕವಾಗಿ ಹಣ ಸಂಪಾದಿಸುವುದರ ಜೊತೆಗೆ ಸಾಮಾಜಿಕ ಗೌರವಗಳನ್ನು ಗಳಿಸಿಕೊಳ್ಳುತ್ತಿದ್ದಾರೆ, ಇದರರ್ಥ ಗ್ರಾಮೀಣ ಪರಿಸರದಲ್ಲಿ ಸಾಮಾಜಿಕ ಗೌರವಗಳನು ಗಳಿಸಿಕೊಳ್ಳಲು ಸಾಧ್ಯವಿಲ್ಲವೆಂದು ಭಾವಿಸಬಾರದು. ಸಂಸ್ಕೃತದ ಅಧ್ಯಯನವೇ ವಿದ್ಯಾಭ್ಯಾಸವೆಂದು ತಿಳಿದೇ ಇದ್ದ ಜನರು ಅದನ್ನು ಬಿಟ್ಟು ಮ್ಲೇಚ್ಚ ಭಾಷೆ ಇಂಗ್ಲೀಷನ್ನು ಕಲಿತು ವಕೀಲ ವೃತ್ತಿಯ ಮೂಲಕ ತಮ್ಮ ಬದುಕಿನ ಸ್ವರೂಪವನ್ನೇ ಬದಲಾಯಿಸಿಕೊಂಡು ಪ್ರಾದೇಶಿಕತೆಯ ಜೀವನದ ಬಗ್ಗೆ ನಿಸ್ಸಾರ ಆಧುನೀಕತೆಯ ಬಗ್ಗೆ ಆಹ್ವಾನವನು ಸ್ವೀಕರಿಸಿದಂತೆ ಕಂಡುಬರುತ್ತದೆ.

"ಕಾದಂಬರಿಕಾರರು ಸಂಪ್ರದಾಯವನ್ನಾಗಲೀ ಆಧುನೀಕತೆಯನ್ನಗಲೀ ಏಕಮುಖವಾಗಿ ಆರಾಧಿಸುವ ಇಲ್ಲವೆ ತಿರಸ್ಕರಿಸುವ ಸರಳ ಮಾರ್ಗ ಹಿಡಿಯದೆ ಒಂದು ಬದುಕಿನ ಪಲ್ಲಟ ಕ್ರಮವನ್ನು ಸೂಕ್ಷ್ಮವಾಗಿ, ಸಂಕೀರ್ಣವಾಗಿ ಗ್ರಹಿಸುವುದರ ಮೂಲಕ ಯುಗ ಪ್ರವರ್ತಕ ಕೃತಿಯೊಂದನ್ನು ಸೃಷ್ಟಿಸುತ್ತಾರೆ"೧೦ ಎಂದು ಟಿ. ಪಿ. ಅಶೋಕರು ಅರ್ಥಪೂರ್ಣವಾಗಿ ಕಾದಂಬರಿಯನ್ನು ವ್ಯಾಖ್ಯಾನಿಸಿದ್ದಾರೆ. "ಮರಳಿ ಮಣ್ಣಿಗೆ" ಕಾದಂಬರಿಯುದ್ದಕ್ಕೂ ನಿರಂತರ ಕಷ್ಟದ ದುಡಿಮೆಯಲ್ಲೇ ಸ್ವಾವಲಂಬನೆಯ ಹಠದ ಸ್ವಾತಂತ್ರ್ಯದ ಕಲ್ಪನೆಯಿದೆ. ಈ ಸ್ವಾವಲಂಬನೆ ಮತ್ತು ಹಠವಿಲ್ಲದಿದ್ದಾಗ ಸ್ವಾತಂತ್ರ್ಯದ ಅಪೇಕ್ಷೆ ಸ್ಥೈರವಾಗಿಬಿಡುತ್ತದೆ. ಬೇಸಾಯ ಕ್ರೂರ ವಾಸ್ತವಗಳನ್ನು ಒಪ್ಪಿಕೊಳ್ಳದ ಹಳ್ಳಿ ಜೀವನವೆಂದರೆ ಬೇಸರಪಡುವ ಲಚ್ಚ- ಲಾಲಸ ಪ್ರವೃತ್ತಿಯುಳ್ಳವನಾಗುತ್ತಾನೆ. ಅವನನ್ನು ಹಾಗಾಗುವಂತೆ ಮಾಡುವುದು ಕಾದಂಬರಿಯ ಉಳಿದಪಾತ್ರಗಳಲ್ಲಿ ಮುಖ್ಯವಾಗಿ ರಾಮೈತಾಳನಲ್ಲಿ ಇರುವ ಕಷ್ಟದ ದುಡಿಮೆಯಿಂದ ಬಿಡುಗಡೆ ಪಡೆಯುವ ಹಂಬಲವನ್ನು

ಲಚ್ಚ ವ್ಯಕ್ತಪಡಿಸುತ್ತಾನೆ. ಇದು ಸಂಪೂರ್ಣವಾಗಿ ಪ್ರಾದೇಶಿಕತೆಗೆ ವಿರುದ್ಧವಾದ ಎಂಬ ಅಂಶವು ಗೋಚರಿಸುತ್ತದೆ.

ಐತಾಳರ ಮೊಮ್ಮಗ ರಾಮ ಮೂರನೇ ತಲೆಮಾರಿಗೆ ಸೇರಿದವನು. ಇವನ ಕಾಲಕ್ಕೆ ಆಧುನೀಕರಣದ ಪ್ರಕ್ರಿಯೆ ಒಂದು ನಿರ್ದಿಷ್ಟ ಘಟ್ಟವನ್ನು ತಲುಪಿದೆ. ಪರಂಪರಾಗತವಾದ ಸಮಾಜವೊಂದು ವಸಾಹತುಶಾಹೀ ಪ್ರವೇಶದಿಂದ ಪಡೆದ ಆಘಾತವನ್ನು ಮೊದಲ ಘಟ್ಟವೆಂದಿಟ್ಟುಕೊಂಡರೆ ಐತಾಳರ ದ್ವಂದ್ವಗಳಿಗೆ ಒಂದು ಸಾಂಸ್ಕೃತಿಕ ಆಯಾಮ ತಾನಾಗಿಯೇ ಬಂದು ಪ್ರಾದೇಶಿಕತೆಯ ಒಳಗಡೆಯೇ ಚಿತ್ರಿಸುತ್ತದೆ. ಲಚ್ಚನ ತಲೆಮಾರಿನ ಜೀವನವನ್ನು ಚಿತ್ರಿಸುವಾಗ ಕಾರಂತರು ಅವನ ಕರಾಳ ಮುಖಗಳತ್ತ ನಮ್ಮ ಗಮನ ಸೆಳೆಯುತ್ತಾರೆ. ಮುಂದಿನ ಘಟ್ಟದಲ್ಲಿ ವಸಾಹತುಶಾಹೀ ತಂದ ಹೊಸ ಮೌಲ್ಯಗಳು ಜೀವನ ಸಾಫಲ್ಯದ ಮೌಲ್ಯಗಳು ಎನಿಸಿಬಿಟ್ಟಿವೆ. ಆದರೆ ಇದರೊಟ್ಟಿಗೆಯೇ ಆಧುನಿಕ ಶಿಕ್ಷಣದೊಂದಿಗೆ ಹುಟ್ಟಿದ ಸ್ವ ಅರಿವು ಮತ್ತು ಹೊಸ ರಾಷ್ಟ್ರೀಯ ಪ್ರಜ್ಞೆಯಿಂದಾಗಿ ವಸಾಹತುಶಾಹಿಯೊಂದಿಗೆ ಪ್ರೀತಿ, ದ್ವೇಷ, ಸಂಘರ್ಷ ಆರಂಭವಾಗಿಬಿಟ್ಟಿದೆ. ರಾಮ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವುದು. ನಿರುದ್ಯೋಗದ ಬವಣೆಯನ್ನು ಅನುಭವಿಸುವುದು ರಾಮನ ಮೇಲೆ ಯಾವುದೇ ತರಹದ ಪ್ರಭಾವ ಬೀರಿದರೂ ಆ ಪ್ರಭಾವಕ್ಕೆ ಒಳಗಾಗದೇ ಮಣ್ಣಿಗೆ ಮರಳುವ ನಿರ್ಧಾರ ಮಾಡುವುದು. ಈ ನಿರ್ಧಾರವು ಪ್ರಾದೇಶಿಕತೆಯ ಮಹತ್ವವನ್ನು ಪ್ರತಿನಿಧಿಸುವುದರಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ ಎಂದು ಭಾವಿಸಬಹುದು.

ತುಂಬಾ ಎಚ್ಚರಿಕೆಯಿಂದ ತನ್ನ ಜೀವನವನ್ನು ರೂಪಿಸಿಕೊಳ್ಳುವ ನಾಗವೇಣಿ, ಮಡಿಯಾದ ಆತ್ಮಸಾಕ್ಷಿಯಲ್ಲಿ ಬೆಳೆದು ಬಂದ ಈ ಹೊಸ ಸಮಾಜದ ಅತ್ಯಂತ ಮಹತ್ವಪೂರ್ಣವಾದ ವ್ಯಕ್ತಿಯಾಗಿದ್ದಾಳೆ. ಇಲ್ಲಿ ಇನ್ನೊಂದು ಅಂಶವನ್ನು ಮುಖ್ಯವಾಗಿ ಗಮನಿಸಬಹುದು. ರಾಮೈತಾಳರು ಮಣ್ಣಿಗೇ ಅಂಟಿಕೊಂಡವರು (ಅರ್ಥಾತ್ ಪ್ರಾದೇಶಿಕತೆಗೆ) ಪಾರೋತಿ ಸರಸೋತಿಯರು ಇನ್ನಷ್ಟು ಗಟ್ಟಿಯಾಗಿ ಅಂಟಿಕೊಂಡವರು. ಲಚ್ಚ ಮಣ್ಣನ್ನು ತ್ಯಜಿಸಿ ಹೋದವನು. ಆದರೆ ರಾಮ ಮಣ್ಣಿಗೆ ಬರುವ ಕ್ರಿಯೆಯು ಮಾತ್ರ ಕಾದಂಬರಿಯಲ್ಲಿ ಅತ್ಯಂತ ಮಹತ್ವಪೂರ್ಣವಾದ ವಿಚಾರವಾಗಿದೆ. ರಾಮ ತನ್ನ ಆಯ್ಕೆಯನ್ನು ಪ್ರಜ್ಞಾಪೂರ್ವಕವಾಗಿ ಮಾಡುತ್ತಾನೆ ಅನ್ನುವುದೇ ಬಹು ಮುಖ್ಯವಾದ ವಿಚಾರವಾಗಿದೆ. "ರಾಮ ತನ್ನ ಅಜ್ಜ ಐತಾಳರಷ್ಟು ಗಟ್ಟಿ ಪಾತ್ರವಲ್ಲ, ಅಷ್ಟೇಕೆ, ಕಾರಂತರ ತರುಣ ಪಾತ್ರಗಳು ವೃದ್ಧ ಪಾತ್ರಗಳಷ್ಟು ಗಟ್ಟಿಮುಟ್ಟಾಗಿಲ್ಲ ಎಂಬ ಟೀಕೆಯನ್ನು ನಾವು

ಸಮಾಧಾನದಿಂದ ಪರಿಶೀಲಿಸಿಕೊಳ್ಳಬೇಕು" ಎಂಬ ಮಾತು ಹೆಚ್ಚು ಅರ್ಥಪೂರ್ಣ ಮತ್ತು ಸಮಂಜಸವೆನಿಸುತ್ತದೆ.

ಮತ್ತೊಂದು ಕಡೆ "ಮರಳಿ ಮಣ್ಣಿಗೆ" ಎಂದರೆ ಕೇವಲ ಸ್ವಂತ ಮನೆಗೆ, ಹುಟ್ಟೂರಿಗೆ ಮರಳುವುದು ಎಂದಷ್ಟೇ ಆಗುವುದಿಲ್ಲ. "ಮರಳಿ ಮಣ್ಣಿಗೆ" ಎಂದರೆ ತನ್ನ ಬೇರುಗಳಿಗೆ ಸ್ಥಳೀಯ, ದೇಶೀಯ ಮೌಲ್ಯಗಳಿಗೆ ಮರಳುವುದು ಎಂದು ವಿಶಾಲವಾಗಿ ವ್ಯಾಖ್ಯಾನಿಸಬೇಕಾಗುತ್ತದೆ. ಮರಳಿ ಮಣ್ಣಿಗೆ ಎಂದರೆ ಇತಿಹಾಸದ ಹಿನ್ನೆಡೆ, ಭೂತಕ್ಕೆ ಮರಳುವುದು ಎಂದು ತಪ್ಪಾಗಿ ಅರ್ಥಮಾಡಿಕೊಳ್ಳಬಾರದು"೧೨ ಎಂದು ಬಹಳ ಅರ್ಥವತ್ತಾಗಿ ವ್ಯಾಖ್ಯಾನಿಸಿ ಸ್ಥಳೀಯ ಮತ್ತು ದೇಶೀಯ ಮೌಲ್ಯಗಳನ್ನು ಎತ್ತಿಹಿಡಿಯುವಲ್ಲಿ ಪ್ರಮುಖ ಪಾತ್ರವಹಿಸಿದ ರಾಮನ ಬಗ್ಗೆ ಈ ಮೇಲಿನ ಅಭಿಪ್ರಾಯವು ಉಚಿತವೆಂದು ಭಾವಿಸಬಹುದು.

"ಉಕ್ಕಿನ ನೊರೆ"ಯ ಶೀನಭಟ್ಟರಿಗೂ ರಾಮನಿಗೂ ಇರುವ ವ್ಯತ್ಯಾಸವನ್ನು ಗಮನಿಸಿದರೆ ಅವರಿಬ್ಬರಿಗೂ ವ್ಯತ್ಯಾಸವು ತಿಳಿಯುತ್ತದೆ. ಶೀನಭಟ್ಟರು ಆಧುನಿಕತೆಗೆ ಒಂದು ಚೂರೂ ತೆರೆದುಕೊಳ್ಳದೆ ಮಣ್ಣಿಗೆ ಅಂಟಿಕೊಂಡಿರುತ್ತಾನೆ. ಪರಂಪರೆಗೆ ಜೋತುಬಿದ್ದು ಜಡವಾಗುತ್ತಾರೆ. ಆದರೆ ರಾಮ ಪರಂಪರೆಯ ಸಾಧ್ಯತೆಗಳನ್ನು ಒಟ್ಟಿಗೇ ನೋಡಿದ್ದಾನೆ. ಅವುಗಳ ಸರಿ ತಪ್ಪುಗಳಿಗೆ ಹೊಂದಿಕೊಂಡಿದ್ದಾನೆ. ಆ ಕಡೆಗೆ ಪಾಶ್ಚಾತ್ಯ ಸಂಪ್ರದಾಯ, ಸಂಸ್ಕೃತಿಯನ್ನು ಬಿಡದೆ, ಇತ್ತಕಡೆ ದೇಶೀಯ ಸಂಪ್ರದಾಯವನ್ನು ಬಿಡದೆ ಇವೆರಡರ ನಡುವೆ ಸಮನ್ವಯ ಕಾಪಾಡಿಕೊಂಡರೂ ಆತ ತನ್ನ ಊರಿಗೆ ಮರಳುವ ನಿರ್ಧಾರ ಮಾಡಿದುದು ಮಾತ್ರ ಪ್ರಾದೇಶಿಕತೆಯನ್ನು ಆತನೇ ಆರಿಸಿಕೊಂಡಂತೆ ಭಾಸವಾಗುತ್ತದೆ.

"ಮರಳಿ ಮಣ್ಣಿಗೆ" ಕಾದಂಬರಿಯಲ್ಲಿ ವರ್ಣಿತವಾಗಿರುವ ಮಳೆ, ಗಾಳಿ, ಕಡಲು ಒಂದು ಸಾಂಕೇತಿಕ ಪ್ರಪಂಚವನ್ನೇ ನಿರ್ಮಿಸಿದೆ ಎಂದರೆ ತಪ್ಪಾಗಲಾರದು. ಕಾದಂಬರಿಯಲ್ಲಿ ವರ್ಣಿತವಾಗಿರುವ ಪಾರೋತಿ, ಸತ್ಯಭಾಮ, ಲಚ್ಚ ಇವರ ಮದುವೆಗಳ ಸಂದರ್ಭಗಳಲ್ಲೆಲ್ಲ ಅನಿವಾರ್ಯವೆಂಬಂತೆ ಮಳೆಗಾಳಿಗಳ ಪ್ರಸ್ತಾಪ ಇದೇ. ಈ ತರಹದ ವರ್ಣನೆಗಳು ಆ ಪ್ರದೇಶದಲ್ಲಿ ಜೀವಿಸಿದವರಿಗೆ ಮಾತ್ರ ವರ್ಣಿಸಲು ಸಾಧ್ಯ. ಈ ಹಿಂದೆ ಡಿ. ಎಲ್. ಎನ್. ಹೇಳಿರುವ ಅಂಶವನ್ನು ಪ್ರಸ್ಥಾಪಿಸಿದ್ದೇನೆ. ಆದರೆ "ಎ. ಎನ್. ಮೂರ್ತಿರಾಯರು" ಮಾತ್ರ ಇದಕ್ಕೆ ಬೇರೆ ತರಹದ ಪ್ರತಿಕ್ರಿಯೆಯನ್ನು ಸೂಚಿಸಿದ್ದರೆ ''ಇಲ್ಲಿ

ನಡೆಯುವ ಮದುವೆ ದಿಬ್ಬಣ, ಮಳೆಗಾಳಿಗಳಿಲ್ಲದೆ ನಡೆಯುವ ಹಾಗೆ ಇಲ್ಲ. ಜೀವನದಲ್ಲಿ ಬೆರೆತ ಕಷ್ಟ, ನಿಷ್ಠುರತೆಗಳ ಪ್ರತಿಮೆ ಇಲ್ಲಿದೆ"೧೩ ಎಂದು ಹೇಳಿದ್ದಾರೆ. ಮತ್ತೊಂದು ಕಡೆ ಜಿ. ಎಸ್. ಆಮೂರ ರವರು "ಪ್ರಕೃತಿಯ ಸ್ವಾಮಿತ್ವವನ್ನು ಒಪ್ಪಿಕೊಳ್ಳುವ ರೀತಿಯಲ್ಲಿಯೇ ಸಮಾಜದಲ್ಲಿ ಪರಂಪರಾಗತವಾಗಿ ರೂಢವಾದ ಮೌಲ್ಯಗಳ ಪ್ರಭುತ್ವವನ್ನು ಎಲ್ಲರೂ ಇಲ್ಲಿ ಸ್ವೀಕರಿಸುತ್ತಾರೆ. ಹೀಗೆಂದಾಗ ಈ ಸಮಾಜ ಸ್ಥಬ್ದ ಸಮಾಜ, ಅಲ್ಲಿ ಹೊಯ್ದಾಟಗಳಿಲ್ಲ ಎಂದು ಅರ್ಥವಾಗುವುದಿಲ್ಲ"೧೪ ಎಂದಿದ್ದಾರೆ. ಪರಂಪರೆಯಿಂದ ಮೌಲ್ಯಗಳನ್ನು ಬಿಟ್ಟುಕೊಡಲು ಅವರು ಸಿದ್ಧರಿಲ್ಲದೆ ತಮ್ಮದೇ ಆದ ಮಣ್ಣಿಗೆ ಅಂಟಿಕೊಂಡಿರುವ ಅಂಶವು ಪ್ರಾದೇಶಿಕತೆಯ ದೃಷ್ಟಿಯಿಂದ ಬಹುಮುಖ್ಯವಾದ ವಿಚಾರವಾಗಿದೆ.

ಮರಳಿ ಮಣ್ಣಿಗೆಯ ಕಾಲ ನಾಡಿನ ಸ್ವಾತಂತ್ರ್ಯದ ಜೊತೆಗೆ ವ್ಯಕ್ತಿ ಸ್ವಾತಂತ್ರ್ಯವನ್ನು ಬಯಸಿ ಪಾಶ್ಚಾತ್ಯ ಪ್ರಭುತ್ವವನ್ನು ಪ್ರಾದೇಶಿಕ ಪರಂಪರೆಯಲ್ಲಿನ ಶೃಂಕಲೆಗಳನ್ನು ಒಟ್ಟಿಗೆ ವಿರೋಧಿಸುವ ಕಾಲ. ಆಗಲೇ ಪಾಶ್ಚಾತ್ಯ ವಿಜ್ಞಾನ, ತಂತಜ್ಞಾನಗಳಿಂದ ಬಂದ ಹೊಸ ಶಿಕ್ಷಣ, ಹೊಸ ಉತ್ಪಾದನಾ ಕ್ರಮ ಹಾಗೂ ಅದರಿಂದ ಉದ್ಭವಿಸುವ ಜೀವನ ಮೌಲ್ಯಗಳ ಪಲ್ಲಟ ಇವುಗಳನ್ನು ಒಪ್ಪುತ್ತಲೆ ತನ್ನ ಮಾತೃ ಸಂಸ್ಥೆಯ ಪರಿಷ್ಕೃತ ಕಲೆ ಸಂಪ್ರದಾಯಗಳನ್ನು ತೆಕ್ಕೆಗೆ ತೆಗೆದುಕೊಳ್ಳುವುದು ಕಂಡುಬರುತ್ತದೆ. "ಮರಳಿ ಮಣ್ಣಿಗೆ " ಮೊದಲು ಪ್ರಕಟಗೊಂಡದ್ದು ೧೯೪೨ ರಲ್ಲಿ ಅದು ದೇಶದ, ಪ್ರಪಂಚದ ಇತಿಹಾಸದಲ್ಲಿ ಮಹತ್ವದ ಕಾಲ, ಆಧುನೀಕತೆಯ ತನ್ನೆಲ್ಲ ಸವಾಲುಗಳೊಂದಿಗೆ ಎದುರುನಿಂತ ಕಾಲ. ಹೊರ ಪ್ರಪಂಚಕ್ಕೆ ಮನ ತೆರೆದಿಟ್ಟ ಕರಾವಳಿಯ ಹಳ್ಳಿಯಲ್ಲಿಯೇ ನೆಲೆಯೂರಿದ ಕಾರಂತರಿಗೆ ತಮ್ಮ ಊರಿನ ವೃಷ್ಟಿ ಜೀವನ ಚಿತ್ರಿಸುತ್ತಲೇ ಸಮಷ್ಟಿ ಜೀವನದಲ್ಲಿನ ಪಲ್ಲಟಗಳನ್ನು ಧ್ವನಿಸುವ ಶಕ್ತಿಯ ಕಾದಂಬರಿಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ.



ಸಾಹಿತ್ಯ ಬಿಟ್ಟು ಸಂಗೀತಕ್ಕೆ ನಾಗವೇಣಿ ಒಲಿಯುತ್ತಾಳೆ. ಸಂಗೀತ ಕಲಿತು, ಮೈಮರೆತು ತನ್ನ ಕಷ್ಟ ಮೆರೆಯುವ ನಾಗವೇಣಿ ಬರೀ ಪಿಟೀಲಿನಿಂದ ಬದುಕು ಸಾಗುತ್ತದೆಯೆ ಎಂದುಕೊಳ್ಳುತ್ತಾಳೆ. ನಾಗವೇಣಿಯ ವ್ಯಕ್ತಿತ್ವ ಸಾರ್ಥಕವಾಗುವುದು ಸಾಹಿತ್ಯ ಸಂಗೀತಗಳಿಂದಲ್ಲ, ಸಾರ್ಥಕತೆ ಕಾಣುವುದು ಛಲ ಹಿಡಿದು ಮಣ್ಣಿಗೆ ಮರಳಿ ಮತ್ತೆ ಮಗನಿಗ ಅದನ್ನು ಒಪ್ಪಿಸುವುದರಿಂದ ತಾಯಿಯಿಂದ ಸಂಗೀತದ ಅಭಿರುಚಿ ಪಡೆದ ರಾಮ, ಪಿಟೀಲಿನಿಂದ ಜೀವನ ನಡೆಸಲು ಹೋಗಿ ಸೋಲುತ್ತಾನೆ. ಚಿತ್ರಕಲೆಯಲ್ಲಿ ತನ್ನ ಅಭಿವ್ಯಕ್ತಿ ಕ್ರಮ ಕಂಡುಕೊಂಡು ತನ್ನ ಮಣ್ಣಿಗೆ ಅರ್ಥಾತ್ ತನ್ನ ಪ್ರದೇಶಕ್ಕೆ ಮರಳುತ್ತಾನೆ.

ತೆಂಕಣಗಾಳಿ ಬೀಸಿ ತಾನೊಬ್ಬನೆ ಇದ್ದಾಗಿನ ಒಂದು ಕ್ಷಣ ತಾನು ಚಿತ್ರಿಸಬೇಕಾದದ್ದೇನು ಎಂದು ಹೊಳೆಯುತ್ತದೆ. ತನ್ನ ಅಭಿವ್ಯಕ್ತಿಯನ್ನು ಆ ಚಿತ್ರದಲ್ಲಿ ಸಫಲಗೊಳಿಸಿಕೊಳ್ಳುತ್ತಾನೆ.

"ಮರಳಿ ಮಣ್ಣಿಗೆ ಒಂದು ಪ್ರಾದೇಶಿಕ ಕಾದಂಬರಿ. ಆದರೆ ಕಾರಂತರು ಎಂಥ ಸೂಕ್ಷ್ಮಜ್ಞರಾದ ಕಲಾವಿದರೆಂದರೆ, ಒಂದು ಹಳ್ಳಿಯ ಜೀವನದಲ್ಲಿ ಒಂದು ಕುಟುಂಬದ ಜೀವನದಲ್ಲಿ ತೃತೀಯ ಜಗತ್ತಿನ ಸ್ಥಿತ್ಯಂತರಗಳ ಒಂದು ಮೂಲ ಮಾದರಿಯನ್ನೇ ಹೊಳೆಯಿಸುತ್ತಾರೆ. ಇಷ್ಟಾದರೂ "ಮರಳಿ ಮಣ್ಣಿಗೆ" ಯ ಮೂಲ ಆಶಯಗಳು ಕೇವಲ ಕಾಲದೊಳಗೆ ಬದ್ಧವಾದವೇನೂ ಅಲ್ಲ. ಎಂಥ ಬವಣೆ, ದಾರಿದ್ರ್ಯಗಳ ನಡುವೆಯೂ ಮನುಷ್ಯ ತನ್ನ ಘನತೆಯನ್ನು ಮೆರೆಯುವ ಸಹಿಷ್ಣುತೆಯಲ್ಲೇ ಬದಲಾವಣೆಯ ಸಾಧ್ಯತೆಯನ್ನು ಒಳಗೊಂಡಿರುವ ನಿರಂತರ ಕಥೆಯನ್ನು ಮರಳಿ ಮಣ್ಣಿಗೆ ಹೇಳುತ್ತದೆ.

ಆದ್ದರಿಂದಲೇ ಈ ಕಾದಂಬರಿ ಸರ್ವಕಾಲಿಕ ಮನುಷ್ಯ ಕಥೆಗೆ ನಿರ್ದಿಷ್ಟ ಕಾಲ ದೇಶಗಳ ಇತಿಹಾಸ ಕಟ್ಟಿಕೊಡುವ ಸಾಂಸ್ಕೃತಿಕ ಅರ್ಥಗಳನ್ನು ಈ ಐತಿಹಾಸಿಕ ಆವರಣ, ಅದರ ವೈಶಾಲ್ಯವನ್ನು ನಿರಂತರತೆಯನ್ನು ಗೌಣಗೊಳಿಸಿದ ಸಾರ್ವಕಾಲಿಕ ಗುಣಗಳನ್ನು ಒಟ್ಟಿಗೆ ತೊಡಗಿಸಿಕೊಂಡು ಹೋಗುತ್ತಾ ಅಪೂರ್ವವಾದ ಅನುಭವವನ್ನು ಕೊಡುತ್ತದೆ. ಹಾಗಾಗಿ ಪ್ರಾದೇಶಿಕತೆಯನ್ನು ಪ್ರತಿನಿಧೀಕರಿಸುವ ಕಾದಂಬರಿಗಳಲ್ಲಿ "ಮರಳಿ ಮಣ್ಣಿಗೆ" ಮೇಲ್ಮಟ್ಟದ ಸ್ಥಾನವನ್ನು ಪಡೆದುಕೊಳ್ಳುತ್ತದೆ ಎಂದು ಭಾವಿಸಬಹುದು.

★★★★★★★★

## ಅಡಿ ಟಿಪ್ಪಣಿಗಳು

೧. ಕೀರ್ತಿನಾಥ ಕುರ್ತುಕೋಟಿ : ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಮನೋಹರ ಗ್ರಂಥಮಾಲೆ, ಧಾರವಾಡ ೧೯೬೨, ಪುಟ-೨೦೩.

೨. ಅದೇ ಪುಟ-೨೦೬

೩. ಗಿರಡ್ಡಿ ಗೋವಿಂದರಾಜ: ಕಾದಂಬರಿ ವಸ್ತು ತಂತ್ರ ಸ್ನೇಹಪ್ರಕಾಶನ, ವಿಜಯನಗರ,ಬೆಂಗಳೂರು ೧೯೮೭, ಪುಟ-೬೫.

೪. ಡಾ। ಎನ್. ಕೆ. ಕೋದಂಡರಾಮ: ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ಗಾಯಿತ್ರಿ ಸ್ಮಾರಕ ಗ್ರಂಥಮಾಲೆ, ಮೈಸೂರು ೧೯೯೬, ಪುಟ-೪೪.

೫. ಶಿವರಾಮ ಕಾರಂತರು : ಮರಳಿ ಮಣ್ಣಿಗೆ, ಎಸ್.ಬಿ.ಎಸ್ ಪಬ್ಲಿಷರ್ಸ್ ಮತ್ತುಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು ೨೦೦೭, ಪುಟ-೫.

೬. ನ. ರವಿಕುಮಾರ:(ಸಂ) ಕಾದಂಬರಿ ಕಣ್ಣಲ್ಲಿ ಕಾರಂತರು, ಪ್ರತಿಭಾ ಯುವ ವೇದಿಕೆ, ರಾಜಾಜಿನಗರ, ಬೆಂಗಳೂರು ೧೯೯೨, ಪುಟ-೨೪.

೭. ಗಿರಡ್ಡಿ ಗೋವಿಂದರಾಜ: ಕಾದಂಬರಿ, ವಸ್ತು ಮತ್ತು ತಂತ್ರ
ಸ್ನೇಹ ಪ್ರಕಾಶನ,
ವಿಜಯನಗರ, ಬೆಂಗಳೂರು ೧೯೮೭,
ಪುಟ–೬೨.

೮. ಕು.ಶಿ. ಹರಿದಾಸ ಭಟ್ಟ: (ಸಂ) ಕಾರಂತ ಪ್ರಪಂಚ"
ಗೀತಾ ಬುಕ್ ಹೌಸ್,
ಮೈಸೂರು ೧೯೬೯,
ಪುಟ–೪೫೦.

೯. ನ. ರವಿಕುಮಾರ್: ಕಾದಂಬರಿ ಕಣ್ಣಲ್ಲಿ ಕಾರಂತರು,
ಪ್ರತಿಭಾ ಯುವ ವೇದಿಕೆ,
ರಾಜಾಜಿನಗರ, ಬೆಂಗಳೂರು ೧೯೯೨,
ಪುಟ–೨೩.

೧೦. ಅದೇ ಪುಟ–೨೫

೧೧. ಅದೇ ಪುಟ–೨೮.

೧೨. ಅದೇ ಪುಟ–೨೦.

೧೩. ಕು.ಶಿ. ಹರಿದಾಸ ಭಟ್ಟ: (ಸಂ) ಕಾರಂತ ಪ್ರಪಂಚ,
ಗೀತಾ ಬುಕ್ ಹೌಸ್, ಮೈಸೂರು ೧೯೬೯,
ಪುಟ–೪೫೩–೪೫೪.

೧೪. ಅದೇ ಪುಟ–೪೫೬.



## ಅಧ್ಯಾಯ: ೫

## ವಸ್ತು, ಭಾಷೆ, ತಂತ್ರ

### ವಸ್ತು:

"ಮರಳಿ ಮಣ್ಣಿಗೆ" ಕನ್ನಡದ ಉತ್ತಮ ಕಾದಂಬರಿಗಳಲ್ಲಿ ಒಂದೆಂದು ನಿರ್ವಿವಾದವಾಗಿ ಪರಿಗಣಿಸಬಹುದು. ಒಂದು 'ಪ್ರಾದೇಶಿಕ ಕಾದಂಬರಿ' ಎಂಬುದರ ಬಗ್ಗೆ ಸಾಮಾನ್ಯವಾಗಿ ಎಲ್ಲಾ ಅಧ್ಯಯನಕಾರರೂ ಒಮ್ಮತದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಡಿ. ಎಲ್. ನರಸಿಂಹಾಚಾರರಿಂದ ಹಿಡಿದು ಇತ್ತೀಚಿನ ಅಧ್ಯಯನಕಾರರು ಈ ಮೇಲಿನ ಅಭಿಪ್ರಾಯವನ್ನು ಒಪ್ಪಿರುವಂತೆ ಕಂಡುಬರುತ್ತದೆ. ಕುರ್ತುಕೋಟಿಯವರು "ಮರಳಿ ಮಣ್ಣಿಗೆ"ಯ ಬಗ್ಗೆ ಬರೆಯುತ್ತಾ "ಪ್ರಾದೇಶಿಕ ಕಾದಂಬರಿಗಳ ವರ್ಗಕ್ಕೆ ಇದನ್ನು ಸುಲಭವಾಗಿ ಸೇರಿಸಬಹುದಾಗಿದ್ದರೂ, ಕಾರಂತರು ಅದರ ಹಿನ್ನೆಲೆಗೆ ಹುಟ್ಟಿಸಿದ ಜೀವನ ವಿನ್ಯಾಸದ ಗಹನತೆ ಆಶ್ಚರ್ಯಕರವಾಗಿದೆ"೧ ಎಂದಿದ್ದಾರೆ. ಇನ್ನೊಂದೆಡೆ ಅವರೇ "ಕತೆಯ ಸರಳವಾದ ಸಮಾನತೆ ಭಾವನೆಗಳ ಅಪೂರ್ವ ಸಂಯಮ, ಪಾತ್ರರಚನೆಯ ಸಹಜತೆ ಇವೆಲ್ಲವುಗಳಿಗೆ ಸತ್ವವನ್ನು ತೇಜಸ್ಸನ್ನು, ಪ್ರಾಣವನ್ನು ನೀಡುವ ಪ್ರಾದೇಶಿಕತೆ ಕಾದಂಬರಿಯ ಅವಿನಾಶಿಯಾದ ಗುಣಗಳಾಗಿವೆ."೨ ಎಂದು ಕಾದಂಬರಿಯ ಪ್ರಾದೇಶಿಕತೆಯ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

"ಪ್ರಾದೇಶಿಕ ಕಾದಂಬರಿ" ಎಂದರೆ ಬಹುಶ: ಯಾವುದೋ ಒಂದು ಪ್ರದೇಶದ ಜನಜೀವನದ ಚಿತ್ರವನ್ನು ಸವಿವರವಾಗಿ ಕೊಡುವ ಕಾದಂಬರಿ ಎಂದು ಭಾವಿಸಬಹುದು. ಇಡಿಯ ಒಂದು ಜನಾಂಗದ ಚಿತ್ರವನ್ನು ಇದು ಕೊಡಬೇಕಾಗಿರುವುದರಿಂದ ಸಹಜವಾಗಿಯೇ ಇದರ ವಸ್ತುವಿನ ವೈವಿಧ್ಯ, ಹರವು ಹೆಚ್ಚಾಗಿರಬೇಕಾಗುತ್ತದೆ. ಮರಳಿ ಮಣ್ಣಿಗೆಯಲ್ಲಿ ಚಿತ್ರಿಸಲ್ಪಟ್ಟಿರುವ ಪ್ರಕೃತಿಯೊಂದಿಗಿನ ಮಾನವನ ಹೋರಾಟ ಈ ದೃಷ್ಟಿಯಿಂದ ಕರಾವಳಿಯ ಜನಜೀವನದ ಒಟ್ಟು ಹೋರಾಟವನ್ನು ಪ್ರತಿನಿಧಿಸುತ್ತದೆ. ಈ ಹೋರಾಟ ಈ ಜನಾಂಗಕ್ಕೆಲ್ಲ ಸಾಮಾನ್ಯವಾಗಿರು ವಂತೆ ಈ ಜನಾಂಗಕ್ಕೆ ವಿಶಿಷ್ಟವು ಆಗಿದೆ.

"ಮರಳಿ ಮಣ್ಣಿಗೆ' ಪ್ರಾರಂಭವಾಗುವುದು ರಾಮೈತಾಳ–ಪಾರೋತಿಯರ ಮದುವೆಯ ವರ್ಣನೆಯಿಂದ. ಇದು ಕಾದಂಬರಿಯ ಜೀವನಕ್ರಮದಲ್ಲಿ ಒಂದು ಮಹತ್ವದ ಹಂತ.

ಈ ಮದುವೆಯಿಂದ ಒಂದೆಡೆ ಸೇರಿದ ಐತಾಳರು, ಪಾರೋತಿ, ಸರಸೋತಿಯರು ಅಷ್ಟೇನೂ ಸಹಾನುಭೂತಿ ಪರವಲ್ಲದ ಪ್ರಕೃತಿಯೊಂದಿಗಿನ ಬದುಕಿನ ಹೋರಾಟದಲ್ಲಿ ಪಾಲುಗೊಳ್ಳುತ್ತಾರೆ. ಇದೊಂದು ವಿಶೇಷವೆಂದು ಅನಿಸಿದಷ್ಟೆ ಅವರಿಗೆ ಹೋರಾಟ ರಕ್ತಗತವಾಗಿಬಿಟ್ಟಿದೆ. ಪೂರ್ವ ಜನ್ಮದ ಕರ್ಮದಂತೆ ಅನಿವಾರ್ಯವಾಗಿದೆ. ಸಹಜವಾಗಿ ಅವರ ನಡುವೆ ವಿರಸ ತಲೆದೋರಿದರೂ ಈ ಹೋರಾಟದ ಮನೋಭಾವನೆ ಅವರನ್ನು ಭದ್ರವಾಗಿ ಒಂದೆಡೆ ಕೂಡಿಸಿ ಹಿಡಿದಿಟ್ಟಿದೆ. ಈ ಹೋರಾಟವೇ ಅವರ ಬದುಕಿನ ಇನ್ನುಳಿದ ದು:ಖವನ್ನು ನುಂಗಿ ಜೀವನಕ್ಕೆ ಒಂದು ಅರ್ಥ ಕೊಡುತ್ತದೆ. ಐತಾಳರೆ ಎರಡನೆಯ ಮದುವೆಯಿಂದುಂಟಾದ ಸತ್ಯಭಾಮೆಯ ಪ್ರವೇಶದಿಂದ ಈ ಹೋರಾಟಕ್ಕೆ ಮತ್ತೊಂದು ಹಂತ ಸೇರಿಕೊಳ್ಳುತ್ತದೆ. ಮನುಷ್ಯ-ಮನುಷ್ಯರ ನಡುವಿನ ಸಂಬಂಧದಲ್ಲಿ ತೊಡಕುಗಳು ಉಂಟಾಗಿ ಹೋರಾಟ ಇಮ್ಮುಖವಾಗುತ್ತದೆ. ಲಚ್ಚನ ಕಾರಣದಿಂದಾಗಿ ಹುಟ್ಟುವ ಅಲ್ಲೋಲಕಲ್ಲೋಲ ಈ ಸಮಸ್ಯೆಯ ತೀವ್ರತೆಗೆ ಒಂದು ನಿದರ್ಶನವಾಗಿದೆ.

ಲಚ್ಚ ನಾಗವೇಣಿಯರ ಮದುವೆಯಿಂದ ಪ್ರಕೃತಿಯೊಂದಿಗಿನ ಹೋರಾಟದಲ್ಲಿ ಬಿಗುವು ಸಡಿಲಿಸಿ, ಮನುಷ್ಯ-ಮನುಷ್ಯರ ನಡುವಿನ ತಿಕ್ಕಾಟಕ್ಕೆ ಹೆಚ್ಚು ಪ್ರಾಧಾನ್ಯ ಬರುತ್ತದೆ. ಹೊಸತನದ ಸಂಪರ್ಕದಿಂದ ಮನುಷ್ಯರಿಗೂ ಭೂಮಿಗೂ ನಡುವಿನ ಸಂಬಂಧದಲ್ಲಿ ಬಿರುಕುಂಟಾಗಿ ಹೋರಾಟ ಎರಡು ಅಸಮಾನ ಶಕ್ತಿಗಳ ನಡುವೆ ಏರ್ಪಟ್ಟು ಮನುಷ್ಯರು ನಿರ್ವಿಣ್ಣರಾಗುತ್ತಾರೆ. ದು:ಖ ಅನಂತವಾಗಿ ಕಾಣುತ್ತಿದೆ. ಈ ಬದುಕಿಗೆ ಹೊರತಾದ ಪರಿಸರವನ್ನು ಸೇರಿದ ಲಚ್ಚ ಆ ಪರಿಸರಕ್ಕೂ ಹೊಂದಿಕೊಳ್ಳದೇ, ಹಳೆಯದನ್ನು ಕಳೆದುಕೊಂಡು ಪರದೇಶಿಯಾಗುತ್ತಾನೆ. ಜೊತೆಗೆ ಇನ್ನುಳಿದವರ ದು:ಖಕ್ಕೂ ಕಾರಣನಾಗುತ್ತಾನೆ. ಈ ಹೋರಾಟದ ಪರಂಪರೆಗೆ ಪರಕೀಯಳಾದ ನಾಗವೇಣಿ ಆ ದು:ಖಕ್ಕೆ ಭಾಗಿಯಾಗಬೇಕಾದ ಸಂದರ್ಭ ಒದಗುತ್ತದೆ. ನಾಗವೇಣಿ ಹೊರಗಿನಿಂದ ಬಂದವಳಾದರೂ ದೂರದಲ್ಲಿ ಅವಳೂ ಈ ಲೆಕ್ಕಕ್ಕೆ ಸೇರಿದವಳೇ ನೆಲದೊಂದಿಗಿನ ಹೋರಾಟದ ಛಲದಿಂದ ಆಕೆ ಮುಂದುವರೆದಾಗ ಅವಳ ಹಿಂದಿನ ತಲೆಮಾರಿನ ಅನಿವಾರ್ಯವಾದ ಸಹಜ ಹೋರಾಟಕ್ಕೂ ನಾಗವೇಣಿಯ ಬುದ್ಧಿಪೂರ್ವಕವಾದ ಹೋರಾಟಕ್ಕೂ ಇರುವ ವ್ಯತ್ಯಾಸ ಗಮನಾರ್ಹವಾಗಿದೆ. ಕ್ರಮೇಣ ಹಂತಹಂತವಾಗಿ ಈ ಹೋರಾಟಕ್ಕೆ ಹೊಂದಿಕೊಳ್ಳುತ್ತಾಳೆ. ಆದ್ದರಿಂದ ನಾಗವೇಣಿ ಮೊದಲನೆ ಹಾಗೂ ಮೂರನೆ ತಲೆಮಾರುಗಳ ನಡುವಿನ ಕೊಂಡಿಯಾಗುತ್ತಾಳೆ. ರಾಮ ಈ ಸಂಸ್ಕೃತಿಗೆ ಹೊರತಾದ ವಿದ್ಯೆ - ಸಂಸ್ಕೃತಿಯನ್ನು ಅರಗಿಸಿಕೊಂಡವನು. ಲಚ್ಚನ ವಿದ್ಯೆಗೂ ರಾಮನ ವಿದ್ಯೆಗೂ ಅಪಾರವಾದ ವ್ಯತ್ಯಾಸವಿರುವಂತೆ ತಿಳಿಯುತ್ತದೆ. ಇದು ತಿಳುವಳಿಕೆಯ ಮಟ್ಟದ್ದು ದೂರದ ಆಮಿಷದ್ದಲ್ಲ. ಆದ್ದರಿಂದಲೇ ತಾನು

ಹುಟ್ಟಿ ಬೆಳೆದ ಸಂಸ್ಕೃತಿಗೂ, ಕಲಿತು ಅರಗಿಸಿಕೊಂಡ ಸಂಸ್ಕೃತಿಗೂ ಸಾಮರಸ್ಯವನ್ನು ಸಾಧಿಸುವುದು ಅವನಿಗೆ ಸಾಧ್ಯವಾಗುತ್ತದೆ.

ಕಾರಂತರು ತಮ್ಮ ಕಾದಂಬರಿಯ ವಸ್ತುವಿನ ಬಗ್ಗೆ ಬರೆಯುತ್ತಾ "ಮೊದಲ ಮಾತಿನಲ್ಲಿ" ನನ್ನ ಊರಿನ ಬಡತನದ ಬಾಳ್ವೆಯೇ ಕಥೆಯ ವಸ್ತುವಾಗಿದೆ. ಈ ಬಾಳ್ವೆಯ ಪ್ರಶ್ನೆ ಮೂರು ತಲೆಮಾರುಗಳಲ್ಲಿ ಹೇಗೆ ಪ್ರತ್ಯುತ್ತರಗೊಳ್ಳುತ್ತದೆ ಎಂಬುದು ಇದರಲ್ಲಿ ಚಿತ್ರಿಸಲ್ಪಟ್ಟಿದೆ" ಎಂದಿದ್ದಾರೆ. ಇದು ಒಂದು ರೀತಿಯಿಂದ ಕಾದಂಬರಿಯ ವಸ್ತುವನ್ನು ತೀರ ಸರಳಗೊಳಿಸುವ ಪ್ರಯತ್ನವಾಗಿಸಿದ್ದಾರೆ, ಇನ್ನೊಂದು ರೀತಿಯಿಂದ ತೀರಾ ಸ್ಥೂಲವಾದ ಹೇಳಿಕೆಯಾಗಿದೆ. ಕಾರಂತರು ಹೇಳುವಂತೆ "ಮರಳಿ ಮಣ್ಣಿಗೆ" ಕೇವಲ ಬಡತನದ ಬಾಳ್ವೆಯ ಕಥೆಯಲ್ಲ. ಮೂರು ತಲೆಮಾರುಗಳ ಜೀವನ ವ್ಯಾಪ್ತಿಯಲ್ಲಿ ಮನುಷ್ಯ ಪ್ರಕೃತಿಯೊಂದಿಗೆ ನಡೆಸಿದ ಹೋರಾಟ, ಮನುಷ್ಯನಿಗೂ ನೆಲಕ್ಕೂ ಇರುವ ಅವಿನಾಭಾವ ಸಂಬಂಧ. ಬದಲಾಗುತ್ತಿರುವ ಜೀವನ ಮೌಲ್ಯಗಳಿಂದ ಪ್ರಾಚೀನ ಸಂಸ್ಕೃತಿಯ ಬದುಕಿನಲ್ಲಿ ನಡೆದಿರುವ ಸ್ಥಿತ್ಯಂತರ, ಮನುಷ್ಯ - ಮನುಷ್ಯರ ಸಂಬಂಧದಲ್ಲಿರುವ ತೊಡಕುಗಳು, ಬದುಕಿನಲ್ಲಿ ಕಲೆಗಿರುವ ಸ್ಥಾನ, ಪ್ರಾಚೀನ ಸಂಸ್ಕೃತಿಯ ಗಟ್ಟಿತನ, ನಿರಂತರ ಹೋರಾಟದಲ್ಲೂ ಮನುಷ್ಯ ಕಾಯ್ದುಕೊಂಡು ಬಂದಿರುವ ಘನತೆ ಹೀಗೆ ಕಾದಂಬರಿಯು ಹಲವು ಮಗ್ಗುಲುಗಳನ್ನು ಹೊಂದಿದೆ. ಈ ಎಲ್ಲಾ ಮಗ್ಗುಲುಗಳನ್ನೂ ಸಹಜವಾಗಿ ಒಳಗೊಳ್ಳಬಲ್ಲ ಜೀವನ ವಿನ್ಯಾಸವು ಇಲ್ಲಿದೆ. ಕುರ್ತುಕೋಟಿಯವರು ಹೇಳುವಂತೆ ಇದು ಕಾರಂತರ "ವಸ್ತುವಿನ ಗಟ್ಟಿತನ" ವನ್ನು ತೋರಿಸುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಈ ಕಾದಂಬರಿಯ ವಸ್ತುವನ್ನು ಮೂರು ಅವಸ್ಥೆಗಳಲ್ಲಿ ನಾವು ಕಾಣುವ ಗ್ರಾಮೀಣ ಸಮಾಜ ಘಟ್ಟಿಯಾಗಿ ಬೇರೂರಿದ ನಿರ್ದಿಷ್ಟವಾದ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದ ಶಾಶ್ವತ ಮೌಲ್ಯಗಳನ್ನು ನಂಬಿದ ಸಮಾಜ, ಪರಂಪರೆ, ಸಂಪ್ರದಾಯ ಈ ಸಮಾಜದ ಜೀವಾಳ. ಇಲ್ಲಿ ಬಾಳುವ ಎಲ್ಲ ವ್ಯಕ್ತಿಗಳೂ ಸರಸೋತಿ, ರಾಮೈತಾಳ, ಪಾರೋತಿ, ಸತ್ಯಭಾಮೆ, ಶೀನ, ನಾರಾಯಣಯ್ಯ ಇತ್ಯಾದಿ ತಮ್ಮ ಆವರಣದೊಂದಿಗೆ ಹೊಂದಿಕೊಳ್ಳುವುದರಲ್ಲಿಯೇ ಧನ್ಯತೆಯನ್ನು ಕಂಡುಕೊಳ್ಳುತ್ತಾರೆ. ಈ ಹೊಂದಾಣಿಕೆಯ ರೀತಿಯಲ್ಲಿ ಮಟ್ಟದಲ್ಲಿ ವ್ಯಕ್ತಿ ವ್ಯಕ್ತಿಗೆ ತಾರತಮ್ಯವಿದೆಯಾದರೂ ಹೋರಾಟದ ಪ್ರಶ್ನೆಯೇ ಇಲ್ಲಿ ಏಳುವುದಿಲ್ಲ. "ವರುಣದೇವರ ಮುಂದೆ ಮನುಷ್ಯರ ಆಟವೇ ಎಂದು ಪ್ರಕೃತಿಯ ಸ್ವಾಮಿತ್ವವನ್ನು ಒಪ್ಪಿಕೊಳ್ಳುವ ರೀತಿಯಲ್ಲಿಯೇ

ಸಮಾಜದಲ್ಲಿ ಪರಂಪರಾಗತವಾಗಿ ರೂಢವಾದ ಮೌಲ್ಯಗಳ ಪ್ರಭುತ್ವವನ್ನು ಇಲ್ಲಿ ಎಲ್ಲರೂ ಸ್ವೀಕರಿಸುತ್ತಾರೆ. ಹೀಗೆಂದಾಗ ಈ ಸಮಾಜ ಸ್ತಬ್ಧ ಸಮಾಜ ಅಲ್ಲಿ ಹೊಯ್ದಾಟಗಳಲ್ಲಿ ಎಂದು

ಅರ್ಥವಾಗುವುದಿಲ್ಲ. ಇಲ್ಲಿ ಸಂಕಟ, ಹೊಯ್ದಾಟಗಳು ಸಾಕಷ್ಟಿವೆ. ಆದರೆ ಇಂತಹ ಆಘಾತಗಳನ್ನು ತಡೆದುಕೊಂಡು ತನ್ನ ಸ್ಥೈರ್ಯವನ್ನು ಉಳಿಸಿಕೊಳ್ಳಬಲ್ಲ ಸಾಮರ್ಥ್ಯ ಈ ಸಮಾಜಕ್ಕಿದೆ. ಉದಾಹರಣಾರ್ಥವಾಗಿ ರಾಮೈತಾಳರು ಮನೆಯಲ್ಲಿ ಯಾರಿಗೂ ಹೇಳದೆ ಎರಡನೆ ಮದುವೆಯ ವ್ಯವಸ್ಥೆಗೆ ತೊಡಗಿದಾಗ ಉಂಟಾಗುವ ಪರಿಸ್ಥಿತಿಯನ್ನು ಪರಿಶೀಲಿಸಬಹುದು. ಮದುವೆಯ ಆವಶ್ಯಕತೆಯನ್ನಾಗಲಿ ಅಥವಾ ಗಂಡಸೆಂದು ರಾಮೈತಾಳರು ಚಲಾಯಿಸುವ ಹಕ್ಕನ್ನಾಗಲಿ ಸರಸೋತಿ–ಪಾರೋತಿಯರು ಪ್ರಶ್ನಿಸುವುದಿಲ್ಲ. ಈ ವಿಷಯ ರಾಮೈತಾಳರಿಗೂ ಚೆನ್ನಾಗಿ ಗೊತ್ತಿದೆ.

"ನಮ್ಮಲ್ಲಿ ಒಬ್ಬ ಯಜಮಾನ ಎಂದರೆ ಒಬ್ಬನೇ ಯಜಮಾನ. ಗಂಡು ಒಂದು ಹೇಳುವುದು, ಹೆಂಡತಿ ಇನ್ನೊಂದು ಅಂಬುವುದು ಈವರೆಗೆ ನಡೆದಿದ್ದಿಲ್ಲ"[೭] ಆದರೆ ರಾಮೈತಾಳರು ತಮ್ಮ ವಿಷಯದಲ್ಲಿ ತೋರಿದ ಅಪನಂಬುಗೆ ಅವರನ್ನು ನೋಯಿಸುತ್ತದೆ. ಸರಸೋತಿ ಯಾಕೆ ಸಿಟ್ಟಾಗುತ್ತೀ"? ಹೆಣ್ಣಾದವಳಿಗೆ ಯಾವ ಮದುವೆಯಲ್ಲಿ ಏನು ಸಿಕ್ಕೀತು? ನೀನು ಆ ಮನೆಗೆ ಹೋದರೆ ಏನು ಸುಖ ಎಂದು ಪಾರೋತಿ ಸಮಾಧಾನ ಹೇಳಿದರೂ ನನ್ನ ಕುಲಗೋತ್ರ ಬೇರೆ . . . ಅವನಲ್ಲಿ ನೀರಿನ ಋಣ ಇರುವಷ್ಟು ದಿನ ಇದ್ದೆ. ಈಗ ಹೊರಟೆ ಎಂದು ಎಲ್ಲ ಸಂಸಾರದ ಬಂಧನಗಳನ್ನು ಕಡಿದು ಸಾಗುವಳಂತೆ. ಸರಸೋತಿ ತನ್ನ ಮಾವನ ಮನೆಗೆ ಹೋಗಿಬಿಡುತ್ತಾಳೆ. ಆದರೆ ಇದೇ ಸರಸೋತಿ ಅಪರಾತ್ರಿಯಲ್ಲಿ ಅಣ್ಣನ ಕರೆಯಬಂದರೂ ತನ್ನ ವೈಯಕ್ತಿಕ ಅಭಿಮಾನವನ್ನು ಬಿಟ್ಟುಕೊಟ್ಟು ಅವನೊಡನೆ ಮತ್ತೆ ತಿರುಗಿಬರುತ್ತಾಳೆ. ರಾಮೈತಾಳರ ಎರಡನೆಯ ಮದುವೆ ಪಾರೋತಿಯ ಸಹನೆಯನ್ನು ಅಭಿಮಾನವನ್ನು ಕೆಣಕುತ್ತವೆ. ಆದರೆ ಅವಳು ಹೋರಾಟಕ್ಕಿಳಿಯುವುದಿಲ್ಲ.

ಪಾರೋತಿಯ ದು:ಖ ಕಡಿಮೆಯಾದೊಡನೆ ಅವಳಿಗೂ ಅನಿಸಿತು. ತಾನು ಮನೆಯವಳಾಗಿದ್ದು ಆದಿನ ಮರೆಯಲ್ಲೆ ಇದ್ದರೆ ಈ ಲಗ್ನ ಪಾರೋತಿಯ ಮನಸ್ಸಿಗೆ ಬಂದು ನಡೆದಿಲ್ಲ ಎಂಬ ಊಹೆ ಊರಿಗೆ ಹರಡಿತೆಂದು ಹಾಗಾಗಕೂಡದೆಂದು ತನಗೆ ಉಕ್ಕಿ ಬರುತ್ತಿದ್ದ ದು:ಖವನ್ನು ಪದ್ದಿಗೆ ತಂದುಕೊಂಡು ಅಡಿಗೆ ಚಪ್ಪರಕ್ಕೆ ಹೋದಳು. ಆ ಹೊಗೆಯಲ್ಲಿ ಕೆಮ್ಮುತ್ತ ಹಪ್ಪಳ ಕರಿಯುವುದರಲ್ಲಿ ಸಹಾಯವಾಗುತ್ತಿದ್ದ ಸರಸೋತಿಯನ್ನು ತಾನೂ ಕೂಡಿಕೊಂಡಳು" [೮].

ಈ ರೀತಿಯ ಆಂತರಿಕ ಹೊಯ್ದಾಟಗಳಿಗೆ ವೈಯಕ್ತಿಕ ಮಾನವೀಯ ಅಂಶಗಳು ಕಾರಣವಾದರೆ ರಾಮೈತಾಳರ ಸಾಮಾಜಿಕ ಸಂಬಂಧಗಳಲ್ಲಿ ನಡೆಯುವ ಹೊಯ್ದಾಟಗಳಿಗೆ ಸಾಮಾಜಿಕ ಅಂಶಗಳು ಕಾರಣವಾಗುತ್ತವೆ. ಶೀನನ ಮಕ್ಕಳು ಹೋಟೆಲ್ ಉದ್ಯಮದಿಂದ ನಗರಗಳಲ್ಲಿ ಗಳಿಸಿದ ದುಡ್ಡು ಹಳ್ಳಿಯಲ್ಲಿ ಹರಿದಾಗ ಶೀನನ ಸ್ವಾಭಾವಿಕ ಈರ್ಷೆಗೆ ಪುಟ ದೊರೆತು ಅವನ ಮತ್ತು ರಾಮೈತಾಳರಲ್ಲಿ ಪೈಪೋಟಿ ಬೆಳೆಯುತ್ತದೆ. ಇದರಿಂದಾಗಿ ಒಂದು ರೀತಿಯ ವಿಷಮ ಪರಿಸ್ಥಿತಿ. ಈ ಸಮಾಜದಲ್ಲಿ ಹುಟ್ಟಿಕೊಂಡು ಅಲ್ಲಿನ ಸ್ವಾಸ್ಥ್ಯವನ್ನು ಕದಡುತ್ತದೆ. ಆದರೆ ಇಂತಹ ಉಲ್ಬಣಗಳನ್ನು ತಡೆದುಕೊಳ್ಳುವ ಶಕ್ತಿಯನ್ನು ಗ್ರಾಮೀಣ ಸಮಾಜ ಇನ್ನೂ ಕಳೆದುಕೊಂಡಿಲ್ಲ. ರಾಮೈತಾಳರ ಕೊನೆಯ ಗಳಿಗೆಯಲ್ಲಿ ಶೀನನಿಗೆ ಅವರನ್ನು ಉಳಿಸುವುದಕ್ಕಾಗುವುದಿಲ್ಲ.

"ಶೀನಮಯ್ಯ" ಮಗುವಾದರೂ, ಐತಾಳರೆ ಕಾಲನ್ನು ಹಿಡಿದರು. ನಾನೇನು ಆಡಿದ್ದರೂ ಕ್ಷಮಿಸಬೇಕು ಎಂದು ಅತ್ತರು. ಆ ಮೊದಲು ಅವರು ಹೇಗೂ ಇದ್ದಿರಲಿ ಅನಂತರ ಹೇಗೊ ಆಗಲಿ. ಐತಾಳರ ಮೃತ್ಯುವಿನ ಎದುರು ಮಾತ್ರ ಪ್ರಾಮಾಣಿಕರೇ ಆಗಿದ್ದರು. ಬಹುದಿನ ಹಗೆ ಕಾರಿದ ಎರಡು ಮುಖಗಳು ಆ ದಿನ ಒಂದನ್ನೊಂದು ಸ್ನೇಹದಲ್ಲಿ ಕಂಡವು"೫

ಈ ಸಮಾಜದಲ್ಲಿ ಬಾಳಿ ಬದುಕುವ ವ್ಯಕ್ತಿಗಳು ಸಾಂಪ್ರದಾಯಿಕ ಮೌಲ್ಯಗಳನ್ನು ದೃಢವಾಗಿ ನಂಬಿರುವುದರಿಂದ ಅವರ ವೈಯಕ್ತಿಕ ಕಷ್ಟ ಕಾರ್ಪಣ್ಯಗಳೇನೇ ಇದ್ದರೂ ತಮ್ಮ ಆವರಣದ ಪರಿಮಿತಿಯಲ್ಲಿಯೇ ಸಫಲತೆಯನ್ನು ದೊರಕಿಸುತ್ತಾರೆ. ಜೀವನವೆಲ್ಲವನ್ನೂ ಕಡು ಕಷ್ಟವನ್ನು ಅನುಭವಿಸಿಯೇ ಪಾರೋತಿ ಸುಖದ ಸಾವನ್ನೇ ಕಾಣುತ್ತಾಳೆ. "ಬೊಗಸೆಗಣ್ಣುಗಳಿಂದ ತನ್ನ ತಲೆಯನ್ನು ಎತ್ತಿಕೊಂಡು ತೊಡೆಯ ಮೇಲಿರಿಸಿಕೊಂಡು ನಾರಾಯಣ ಸ್ಮರಣೆ ಮಾಡುವ ಐತಾಳರ ಮುಖವನ್ನು ಅವಳು ಚೆನ್ನಾಗಿ ಕಾಣುತ್ತಿದ್ದಳು. ಸರಸೋತಿಯು ಗಂಗಾ ಜಲವನ್ನು ಅವಳ ಬಾಯಿಗೆ ಎರೆದಳು. ಕಾಲಬುಡದಲ್ಲಿ ಸತ್ಯಭಾಮೆ ಬಂದು ಕುಳಿತಳು. ಪಾರೋತಿಯ ಮುಖದಲ್ಲಿ ಶಾಂತಿ ತುಂಬಿ ನಿಷ್ಕಲ್ಮಷ ಎಳೆನಗುವಿನಿಂದ ನನಗೇನು ಬೇಕಿನ್ನು! ಎನ್ನುವ ತೃಪ್ತಿಯನ್ನು ಸಾರುತ್ತಿತ್ತು"೬

ಮುತ್ತೈದೆಯ ಸಾವು ಪಾರೋತಿಯ ಆತ್ಮಕ್ಕೆ ಶಾಂತಿಯನ್ನು ನೀಡುತ್ತದೆ. ಆದರೆ ಪ್ರಾಪಂಚಿಕರಾದ ರಾಮೈತಾಳರು ಶೀನಮಯ್ಯನ ಮನೆಗಿಂತ ಮಿಗಿಲಾದ ಮನೆಯನ್ನು ಕಟ್ಟುವುದರಲ್ಲಿ ಧನ್ಯತೆಯನ್ನು ಪಡೆಯುತ್ತಾರೆ. ಸತ್ತು ನಾಲ್ಕು ದಿನದ ತನಕವಾದರೂ ಇದು

ರಾಮ್ಮೈತಾಳರ ಮನೆ ಎಂದು ಯಾರಾದರೂ ಹೇಳಿದರೆ ಸಾಕು ಎನ್ನುವ ಸಮಾಧಾನ ಮಗನಿಂದುಂಟಾದ ದು:ಖವನ್ನೂ ಮರೆಯಿಸುತ್ತದೆ. ಕಾಶೀಯಾತ್ರೆಯ ಒಂದೇ ಒಂದು ಆಸೆಯನ್ನಿಟ್ಟುಕೊಂಡು ಎರಡನೆಯವರ ಸಲುವಾಗಿಯೇ ತನ್ನ ಬಾಳನ್ನು ತೇಯ್ದ ಸರಸೋತಿ ತಮ್ಮನ ಮೊಮ್ಮಗನ ಕೈಯಿಂದ ಗಂಗಾ ಜಲವನ್ನು ಕುಡಿದು ಇಚ್ಛಾಮರಣಿಯಾಗಿ ಸಾವನ್ನಪ್ಪುತ್ತಾಳೆ. ಸ್ವಯಂ ಸಿದ್ಧ ಮೌಲ್ಯಗಳನ್ನೇ ಈ ಎಲ್ಲಾ ವ್ಯಕ್ತಿಗಳು ಬಳಸಿಕೊಳ್ಳುತ್ತಾರಾದರೂ ಅವುಗಳಲ್ಲಿ ತಮ್ಮ ಬಾಳನ್ನು ಹೊಂದಿಸಿಕೊಳ್ಳುವುದರಲ್ಲಿ ತುಂಬಾ ಜಾಗೃತರಾಗಿಯೇ ಕೆಲಸ ಮಾಡುತ್ತಾರೆ. ಇದರಿಂದ ಅವರ ಬಾಳುವೆಗೆ ಅರ್ಥ ಬರುತ್ತದೆ.

ಶಾಶ್ವತ ಮೌಲ್ಯಗಳ ನೆಲೆ ತಪ್ಪಿದಾಗ ತಲೆದೋರುವ ಅಂತರ ಪಿಶಾಚಿಯ ಅವಸ್ಥೆ ಕಾದಂಬರಿಯ ವಸ್ತುವಿನ ವಿಕಾಸದ ಎರಡನೆಯ ಹಂತದಲ್ಲಿ ಕಂಡುಬರುತ್ತದೆ. ಈ ಅವಸ್ಥೆಯನ್ನು ರಾಮ್ಮೈತಾಳರ ಮಗ ಲಚ್ಚ ಸಂಪೂರ್ಣವಾಗಿ ಪ್ರತಿನಿಧೀಕರಿಸುತ್ತಾನೆ. ಲಚ್ಚನ ಅಂತರ ಪಿಶಾಚಿತನಕ್ಕೆ ಅವನ ಸ್ವಭಾವದಲ್ಲಿನ ಕೆಲವು ಅಂಶಗಳು ಕಾರಣವಾದಂತೆ, ಮಗನಿಗೆ ಇಂಗ್ಲಿಷ್ ಶಿಕ್ಷಣವನ್ನು ಕೊಡಿಸಿ ಅವನನ್ನು ದೊಡ್ಡ ಆಫೀಸರನನ್ನಾಗಿ ಮಾಡಬೇಕೆನ್ನುವ ರಾಮ್ಮೈತಾಳರ ಹೊಸ ನಾಗರೀಕ ಮಹತ್ವಾಕಾಂಕ್ಷೆಯೂ ಕಾರಣವಾಗುತ್ತದೆ. ಇಂಗ್ಲೀಷ್ ಶಿಕ್ಷಣದ ಹವ್ಯಾಸದಿಂದಾಗಿ ಲಚ್ಚ ಮನೆಗೆ ಎರವಾಗಿ, ಉಡುಪಿಯಂತಹ ಮನೆಯನ್ನು ಸೇರಬೇಕಾಗುತ್ತದೆ. ಗ್ರಾಮೀಣ ಜೀವನದ ಮೌಲ್ಯ ಕ್ರಮದ ಬಿಗಿಯಾದ ಹಿಡಿತದಿಂದ ತಪ್ಪಿಸಿಕೊಂಡ ಲಚ್ಚನ ಜೀವನ ತಗ್ಗಿದಲ್ಲೆಲ್ಲ ಹರಿಯತೊಡಗುತ್ತದೆ. ಲಚ್ಚನಲ್ಲಿ ಬಾಳ್ವೆಯ ಅರಿವು ತೀರಾ ಕಡಿಮೆ. ಕೇವಲ ಐಂದ್ರಿಯಕ ಅನುಭವದ ಬೆನ್ನು ಹತ್ತುವುದೇ ಅವನ ಪ್ರಕೃತಿ ಧರ್ಮ, ಸಣ್ಣವನಿದ್ದಾಗ ಬಾಯಿಚಪಲ, ದೊಡ್ಡವನಾದ ಮೇಲೆ ಕಾಮುಕ ಜೀವನ ಇವು ಅವನ ಜೀವನದ ಗತಿಯನ್ನು ನಿರ್ಧರಿಸುತ್ತದೆ. ಆದರೂ ತನಗೆ ತಿಳಿಯದಂತೆಯೇ ಅವನು ಹೊಸ ಮೌಲ್ಯಗಳು ಹುಟ್ಟಿಕೊಳ್ಳುವುದಕ್ಕೆ ಕಾರಣನಾಗುತ್ತಾನೆ. 'ಗಮ್ಮತ್ತು' ಮೋಜಿನ ಜೀವನ ಇವುಗಳಿಗೆ ಲಚ್ಚ ಕೊಡುವ ಮಹತ್ವ ಅವನು ಹುಟ್ಟಿಕೊಂಡ ಸಮಾಜಕ್ಕೆ ಹೊಸತು ಇವುಗಳಿಂದಾಗಿ ಲಚ್ಚ ತನ್ನ ಕೌಟುಂಬಿಕ ಮತ್ತು ಸಾಮಾಜಿಕ ಆವರಣದಲ್ಲಿ ಹೊಸಬಗೆಯ ಬಿಕ್ಕಟ್ಟು ಹುಟ್ಟಿಕೊಳ್ಳುವುದಕ್ಕೆ ಕಾರಣನಾಗುತ್ತಾನೆ.

ಈ ಬಿಕ್ಕಟ್ಟು ಮೊದಲು ಕಾಣಿಸಿಕೊಳ್ಳುವುದು ಲಚ್ಚ ಮತ್ತು ರಾಮ್ಮೈತಾಳರ ಸಂಬಂಧದಲ್ಲಿ ಇಂಗ್ಲೀಷ್ ಕಲಿತ ಮಗನ ವಿಷಯವಾಗಿ ರಾಮ್ಮೈತಾಳರಿಗೆ ಅವ್ಯಕ್ತವಾದ ಭೀತಿಯಿದ್ದರೆ, ಲಚ್ಚನಿಗೆ ಅವರ ಬಗ್ಗೆ ಒಂದು ರೀತಿಯ ತಾತ್ಸಾರ ಜಿಗುಪ್ಸೆ. ತುಂಬಾ ಹಣವಿದ್ದರೂ ಹೊಟ್ಟೆಕಟ್ಟಿ ಜೀವಿಸುವುದೇನು ತಾಯಿ ತಿಂಗಳಿಗೆ ಬರಿಯ ೮–೧೦ ರೂಪಾಯಿಗಳನ್ನು ಕೇಳಿದರೆ

ಅಪ್ಪನು ಕೋಪ ತಾಳುತ್ತಾನೆ. ನಗರವಾಸದಿಂದ ಹಣದ ಹೊಸ ಹೊಸ ಉಪಯೋಗಗಳನ್ನು ಕಲಿತ ಲಚ್ಚನಿಗೆ ತನ್ನ ತಂದೆಯ ಜಿಪುಣತನ ಅಪರಾಧವೆಂದು ತೋರುತ್ತದೆ. ತನ್ನ ಮೇಲೆ ಅವರಿಗಿರುವ ಅಧಿಕಾರವನ್ನು ಅವನು ಆಹ್ವಾನಿಸುತ್ತಾನೆ. ಅವರನ್ನು ಕೆರಳಿಸುವ ಉದ್ದೇಶದಿಂದಲೇ ಅವರ ಪ್ರತಿಸ್ಪರ್ಧಿ ಶೀನಮಯ್ಯರೊಡನೆ ಸಲುಗೆಯನ್ನು ಬೆಳೆಸುತ್ತಾನೆ. ಮನೆಯ ಮರ್ಯಾದೆಯ ಪರಿವೆಯಿಲ್ಲದೆ ಜಲಜಳೊಡನೆ ಅನೈತಿಕ ಸಂಬಂಧವನ್ನು ಇಟ್ಟುಕೊಳ್ಳುತ್ತಾನೆ. ರಾಮೈತಾಳರ ಕೌಟುಂಬಿಕ ಬಿಕ್ಕಟ್ಟು ಸಾಮಾಜಿಕ ಸ್ವರೂಪವನ್ನು ತಳೆದಾಗ ತಂದೆ ಮಕ್ಕಳು ಒಬ್ಬರಿಗೊಬ್ಬರು ಸಿಡಿದುಹೋಗುತ್ತಾರೆ. ಎಂತಹ ಪರಿಸ್ಥಿತಿಯಲ್ಲಿಯೂ ರಾಮೈತಾಳರ ಕುಟುಂಬದವರು ರಕ್ಷಿಸಿಕೊಂಡು ಬಂದ ಸಾಮರಸ್ಯ ಕೊನೆಗೊಳ್ಳುತ್ತದೆ.

"ರಾಮೈತಾಳರ ಕೈ ಮೇಲಕ್ಕೇರಿತು. ಆದರೆ ಹೊಡೆಯುವ ಶಕ್ತಿ ಇಲ್ಲ. ಲಚ್ಚನ ರೀತಿಯನ್ನು ಬಲ್ಲರು. ಇದು ಚಿಕಿತ್ಸೆಯಿಲ್ಲದ ಜಾಡ್ಯವೆಂದು ಅವರಿಗೂ ತಿಳಿದಿದೆ. ಒಂದೇ ಉತ್ತರವಿತ್ತರು ನೀನು ಹೀಗೆ ಇರುವುದಾದರೆ ನನ್ನ ಮನೆಯಲ್ಲಿರಬೇಡ ನಿನ್ನ ನನ್ನ ಋಣ ಹರಿಯಿತು. ನಾನು ನಿನ್ನ ಅಪ್ಪನಲ್ಲ ನೀನು ನನ್ನ ಮಗನಲ್ಲ".೭

ಲಚ್ಚ ಮರ್ಯಾದೆಗಿಂತ ಮನುಷ್ಯನಿಗೆ ಬೇರೆ ಬದುಕುಂಟೇ ಎಂದು ಪಾರೋತಿ ಎಂದಾಗ ಲಚ್ಚ ಹೌದು ಎಂದೇನೋ ಹೇಳುತ್ತಾನೆ. ಆದರೆ ಈ ತತ್ವದ ಅರ್ಥವೇ ಅವನಿಗೆ ತಿಳಿಯದು. ಲೇಖಕರೇ ಹೇಳುವಹಾಗೆ ಅವನಿಗೆ ತನ್ನೊಬ್ಬನದೇ ಯೋಚನೆ. ಉಳಿದವರ ಯೋಚನೆ ಇರಲಿಲ್ಲ. ಆದರೆ ಲಕ್ಷ್ಯದಲ್ಲಿಡಬೇಕಾದ ಮಾತೆಂದರೆ ಲಚ್ಚನ ಪ್ರತ್ಯೇಕತೆಗೆ ತಾತ್ವಿಕ ನಂಬುಗೆಯ ತಳಹದಿಯಲ್ಲಿ ಸಮಾಜಕ್ಕಾಗಲೀ ತನ್ನ ಕುಟುಂಬಕ್ಕಾಗಲೀ ಅವನು ನೀಡುವ ಆಹ್ವಾನ ಉದ್ದೇಶ ಪೂರ್ಣವಾದುದಲ್ಲ. ಹೀಗಾಗಿ ಲಚ್ಚ ತನಗೆ ಗೊತ್ತಿಲ್ಲದಂತೆಯೇ ಒಂದು ಕ್ರಾಂತಿಯನ್ನು ಸಾಧಿಸುತ್ತಾನಾದರೂ ಹೊಸ ಮೌಲ್ಯಗಳನ್ನು ರೂಪಿಸಿಕೊಳ್ಳಲು ಶಕ್ತನಾಗಿರುವುದಿಲ್ಲ. ಅವನಿಗೂ ರಾಮನಿಗೂ ಇರುವ ಮುಖ್ಯ ಅಂತರ ಇದೇ ಆಗಿದೆ.

ಲಚ್ಚನಿಗೆ ತಾನು ಮಾಡುತ್ತಿರುವ ಕೃತ್ಯಗಳ ಬಗ್ಗೆ ಅರಿವಾಗಲಿ ಹೊಣೆಗಾರಿಕೆಯಾಗಲಿ ತೀರ ಕಡಿಮೆ. ಗ್ರಾಮೀಣ ಸಮಾಜದ ನೈತಿಕ ಕಟ್ಟಳೆಗಳನ್ನು ಮೀರಿ ಅನುಭವದ ಬೆನ್ನು ಹತ್ತಿ ಅವನು ಸುತ್ತುತ್ತಾನೆ. ಪಾಪ ಪ್ರಜ್ಞೆಯಾಗಲಿ ಪರದೇಶಿತನವಾಗಲಿ ಅವನ ಮನಸ್ಸನ್ನು ವಿಶೇಷವಾಗಿ ಕದಡುವುದಿಲ್ಲ. ನಾಗವೇಣಿಯನ್ನು ಪುಸಲಾಯಿಸಿ ಅವಳ ಆಸ್ತಿಯನ್ನೆಲ್ಲಾ ಪೋಲು ಮಾಡಿದರೂ ಅವನಿಗೆ ಪಶ್ಚಾತಾಪವಿಲ್ಲ. ಅವನಿಗೆ ಮಜ ಮಾಡುವುದಕ್ಕೆ ಹಣ ದೊರೆತರಾಯಿತು. ಉಳಿದುದರ ಪರಿವೆಯೇ ಇಲ್ಲ. ಮಾನವೀಯ ಸಂಬಂಧಗಳಿಗಂತೂ ಅವನ

ಜಗತ್ತಿನಲ್ಲಿ ಸ್ಥಾನವೇ ಇಲ್ಲ. ತಾನು ಸಂಪಾದಿಸಿದ ರೋಗಗಳಿಗೆ ಆಹುತಿಯಾಗುವ ನಾಗವೇಣಿಯಲ್ಲೂ ಅವನಿಗೆ ಅನುಕಂಪವೆನಿಸುವುದಿಲ್ಲ. ಈ ರೀತಿಯ ನಿರ್ಲಿಪ್ತತೆಗೆ ತಾತ್ವಿಕ ನಂಬುಗೆಯಿದ್ದರೆ ಲಚ್ಚನ ವ್ಯಕ್ತಿತ್ವದ ಮಟ್ಟ ಬೇರೆಯೇ ಆಗಬಹುದಾಗಿತ್ತು. ಆದರೆ ಅವನೊಬ್ಬ ಸೂತ್ರ ತಪ್ಪಿದ ಗಾಳಿಪಟ ಆಗಿದ್ದಾನೆ. ಲಚ್ಚನ ಬೇಜವಾಬ್ದಾರಿಯ ಪ್ರತ್ಯೇಕ ಪರಿಣಾಮ ಆಗುವುದು ನಾಗವೇಣಿಯ ಮೇಲೆ. ಈ ಕಾದಂಬರಿಯ ಪಾತ್ರಗಳೆಲ್ಲ ಹೆಚ್ಚು ಸಂಕೀರ್ಣತೆಯನ್ನು ಹೊಂದಿದ ಪಾತ್ರ ನಾಗವೇಣಿಯದು. ಒಂದು ರೀತಿಯಿಂದ ಅವರು ಸರಸೋತಿ ಪಾರೋತಿಯರು ನೆಚ್ಚಿಕೊಂಡು ಬಂದ ಸಾಂಪ್ರದಾಯಿಕ ಮೌಲ್ಯಗಳನ್ನೇ ಪ್ರತಿಕ್ರಿಯಿಸಿದರೆ ಇನ್ನೊಂದು ರೀತಿಯಿಂದ ರಾಮನು ಪ್ರತಿನಿಧೀಕರಿಸುವ ಹೊಸ ಮೌಲ್ಯಗಳು ರೂಪುಗೊಳ್ಳುವುದಕ್ಕೆ ಕಾರಣಳಾಗುತ್ತಾಳೆ. ಲಚ್ಚನಿಂದ ಅವಳ ಜೀವನಾನುಭವ ಜಟಿಲವಾಗುತ್ತದೆ, ದು:ಖದಾಯಕವೂ ಆಗುತ್ತದೆ. ಆದರೆ ಅವಳ ಧೈರ್ಯ ಶ್ರದ್ಧೆಗಳಿಂದಾಗಿ ಈ ಅನುಭವ ವಿಲಕ್ಷಣವಾದ ಅರ್ಥವನ್ನು ಪಡೆಯುತ್ತದೆ. ಅವಳ ವ್ಯಕ್ತಿತ್ವ, ಸಾಧನೆ ಬೇರೆಯವರಿಗೆ ಸ್ಫೂರ್ತಿದಾಯಕವಾಗುತ್ತದೆ. ಸಮಾಜದ ಒಂದು ಸಂಕ್ರಮಣದ ಅವಸ್ಥೆಯ ಸೆಳವಿನಲ್ಲಿ ಸಿಕ್ಕರೂ ಧೃತಿಗೆಡದೆ ದಡವನ್ನು ತಲುಪುವ ನಾಗವೇಣಿಯ ಸಾಹಸ ಅವಳಿಗೆ ಕೃತಾರ್ಥತೆಯನ್ನು ತಂದುಕೊಡುತ್ತದೆ.

ನಾಗವೇಣಿಯಲ್ಲಿ ಕಂಡುಬರುವ ಅಂತರ್ಮುಖತೆ ಅವಳಲ್ಲಿ ಸದಾ ಜಾಗೃತವಾಗಿರುವ ವಿವೇಕದ ಒಂದು ಕುರುಹು. ಈ ಅಂತರ್ಮುಖತೆಯೇ ಎಂತಹ ಪರಿಸ್ಥಿತಿಯಲ್ಲಿಯೂ ಅವಳ ಧೈರ್ಯವನ್ನು ಕಾಯ್ದುಕೊಂಡು ಬರುವುದಕ್ಕೆ ಕಾರಣವಾಗುತ್ತದೆ. ಇದರ ಜೊತೆಗೆ ಅವಳ ಮಾನವೀಯತೆಯೂ ಸೇರಿ ಅವಳ ಪಾತ್ರ ತುಂಬ ವಾಸ್ತವಿಕವಾಗಿ ಕತೆಯಲ್ಲಿ ಸೇರುತ್ತದೆ. ನನ್ನ ಬಾಳ್ವೆ ಕೆಡಿಸಲು ಬಂದ ಪ್ರಾಣಿ ಎಂದು ಅವಳು ತನ್ನ ಗಂಡನನ್ನು ತಿಳಿದರೂ ಅವನು ಒಬ್ಬ ಮನುಷ್ಯನನ್ನಾಗಿ ಮಾಡುವುದಕ್ಕೆ ಎಷ್ಟು ಸಾಧ್ಯವಿದೆಯೋ ಅಷ್ಟೆಲ್ಲವನ್ನೂ ಮಾಡುತ್ತಾಳೆ. ವಯಸ್ಸಿಗೆ ಸಹಜವಾದ ಆಸೆಯಿಂದ ಒಮ್ಮೊಮ್ಮೆ ಅವನಿಗೆ ಸೋಲುತ್ತಾಳೆ. ತನ್ನ ಅತ್ತೆಯನ್ನು ನಿರ್ಗತಿಕಳನ್ನಾಗಿ ಬಿಟ್ಟುಹೋಗುವ ದುರ್ಧರ ಪರಿಸ್ಥಿತಿಯನ್ನು ಎದುರಿಸಲಾರದೆ ಆತ್ಮಹತ್ಯೆಗೂ ತೊಡಗುತ್ತಾಳೆ. ಆದರೆ ಇವು ಅವಳ ಮಾನವೀಯತೆಯನ್ನು ವ್ಯಕ್ತಪಡಿಸುತ್ತವೆಯೇ ಹೊರತು ಅವಳ ಅಶಕ್ತತೆಯನ್ನಲ್ಲ. ಮುಖ್ಯವಾಗಿ ತನ್ನ ಕಷ್ಟಗಳ ಸಂಪೂರ್ಣ ಹೊಣೆಯನ್ನು ಹೊರುವ ನಿರ್ಧಾರ, ಶಕ್ತಿ ಅವಳಲ್ಲಿದೆ ಎಂತಲೇ ಏಕೆ ಸಾಂಪ್ರದಾಯಿಕ ಮೌಲ್ಯಗಳನ್ನು ಒಪ್ಪಿಕೊಂಡರೂ ಅವಳು ಆಧುನೀಕತೆಯ ಪ್ರತೀಕವೇ ನಿಜವಾಗಿ ನೋಡಿದರೆ ನಾಗವೇಣಿ ಸಂಪ್ರದಾಯ ಮತ್ತು ಆಧುನೀಕತೆ ಎರಡಕ್ಕೂ ಭದ್ರವಾದ ಸೇತುವೆಯನ್ನು ಕಟ್ಟುತ್ತಾಳೆ. ಅವಳ ವಿವೇಕ, ನೆಲಕ್ಕೆ ಹೊಂದಿಕೊಂಡಿರುವ ಆಸೆ, ಸ್ವಾಭಿಮಾನ ರಾಮನಲ್ಲಿಯೂ ಇಳಿದು ಬೇರುಬಿಟ್ಟು

ಫಲಕೊಡುತ್ತಾನೆ. ಎಲ್ಲಕ್ಕಿಂತ ಹೆಚ್ಚಾಗಿ ಅವಳ ವಿಲಕ್ಷಣವಾದ ಅಂತರ್ಮುಖತೆ ಕಲಾಸೃಷ್ಟಿಯಾಗಿ ಮಾರ್ಪಟ್ಟು ಅವನ ಜೀವನಕ್ಕೆ ಸಾರ್ಥಕತೆಯನ್ನು ತಂದುಕೊಡುತ್ತದೆ. ರಾಮೈತಾಳರಲ್ಲಿ ಲಚ್ಚನಲ್ಲಿ ಕಾಣದ ಒಂದು ಸ್ವಂತದ ಅರಿವು ರಾಮನಲ್ಲಿ ಅವನ ಎಳೆ ವಯಸ್ಸಿನಿಂದಲೂ ನಮಗೆ ಕಂಡುಬರುತ್ತದೆ. ಉದಾಹರಣೆಗಾಗಿ ಸಮುದ್ರಕ್ಕೂ ತನಗೂ ಇರುವ ಸಂಬಂಧದ ಬಗ್ಗೆ ಅವನ ತಿಳುವಳಿಕೆ ಸಮುದ್ರದಲ್ಲಿ ಯಾರು ನಿನ್ನ ಹತ್ತಿರ ಮಾತನಾಡುವವರು?
ಸಮುದ್ರ.

"ಅದು ಮಾತನಾಡುತ್ತದೆಯೋ ಅಣ್ಣ ನಿನ್ನ ಹತ್ತಿರ! ಹೌದು ಅದಕ್ಕೂ ನನಗೂ ಪ್ರೀತಿ, ನನ್ನ ಹತ್ತಿರ ಅದಕ್ಕೆ ತುಂಬ ಕೊಂಡಾಟ ಬಾ ಅಮ್ಮ ಹೋಗುವ"೮

ಈ ಕಡಲಿನ ಹಂಬಲ ರಾಮನಲ್ಲಿ ಕೊನೆಯವರೆಗೂ ಜಾಗೃತವಾಗಿ ಉಳಿದು ಅವನನ್ನು ಮಣ್ಣಿಗೆ ಮರಳಿಸುತ್ತದೆ. ಇದೇ ರೀತಿಯ ಒಂದು ತಿಳುವಳಿಕೆಯನ್ನು ಅವನ ಮತ್ತು ಅವನ ತಾಯಿ ನಾಗವೇಣಿಯ ಸಂಬಂಧದಲ್ಲಿ ನಾವು ಕಾಣುತ್ತೇವೆ. ಆದರೆ ನಿಜವಾಗಿಯೂ ರಾಮನ ವ್ಯಕ್ತಿತ್ವ ಪರೀಕ್ಷೆಯಾಗುವುದು ಅವನ ಹೊಸ ಮೌಲ್ಯಗಳನ್ನು ನಿರ್ಮಿಸಿಕೊಳ್ಳಬೇಕಾದಾಗ ಮದ್ರಾಸಿನಲ್ಲಿ ಅವನು ಓದುತ್ತಿರುವಾಗ ರಾಜಮಣಿಯ ಸಹವಾಸದಿಂದ ರಾಮನ ಕ್ಷಿತಿಜ ವಿಶಾಲವಾಗುತ್ತದೆ. ಇದುವರೆಗೆ ತನಗೆ ಮತ್ತು ತನ್ನ ಆಪ್ತ ಮಿತ್ರರಿಗೆ ಪರಿಮಿತವಾದ ಅವನ ಜೀವನ ಹೊಸದೊಂದು ದಿಕ್ಕಿನಲ್ಲಿ ಹರಿಯತೊಡಗುತ್ತದೆ. ರಾಮನ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕುತ್ತಾನೆ. ಮನುಷ್ಯ ಕೇವಲ ತನ್ನ ಹೊಟ್ಟೆ ಹೊರೆಯುವುದಕ್ಕೆ ಬದುಕಿಲ್ಲ ಎನ್ನುವ ಹೊಸ ಅರಿವು ಅವನ ಜೀವನವನ್ನೇ ಮಾರ್ಪಡಿಸುತ್ತದೆ. ಮುಂದೆ ಅವನು ಹಳ್ಳಿಗೆ ಮರಳಿದ ನಂತರ ಅವನ ಆದರ್ಶಗಳಿಗೆ ವಾಸ್ತವಿಕತೆಯ ಧಕ್ಕೆ ತಗುಲಿದಾಗ ಹೊಸ ಹೊಂದಾಣಿಕೆಗಳನ್ನು ಅವನು ಮಾಡಿಕೊಳ್ಳಬೇಕಾಗುತ್ತದೆ. ಆದರೆ ಇಂತಹ ಆಂತರಿಕ ಬಲವನ್ನು ಅವನು ಈಗಾಗಲೇ ಸಂಪಾದಿಸಿದ್ದಾನೆ. ಇದರಿಂದಾಗಿಯೇ ಬೆಂಗಳೂರು, ಮೈಸೂರು, ಮುಂಬೈ ಅಲೆದಾಟದಲ್ಲಿಯೂ ಕೂಡ ಅವನ ಅಂತರಂಗ ಕದಡುವುದಿಲ್ಲ. ನಿರಾಸೆಯಿಂದ ಅವನ ಜೀವನ ಕಲುಷಿತವಾಗುವುದಿಲ್ಲ. ಬದಲಾಗಿ ಈ ಅನುಭವ ಅವನಿಗೆ ಒಂದು ವಿಧವಾದ ಪಕ್ವತೆಯನ್ನೇ ತಂದುಕೊಡುತ್ತದೆ. ಮಣ್ಣಿಗೆ ಮರಳುವುದಕ್ಕೆ ಕಾರಣವಾಗುತ್ತದೆ.

ಈ ಕಾದಂಬರಿಯ ಕೊನೆಯು ನಾಗವೇಣಿ ರಾಮನಿಗೆ ರಾಮ ಅವಳ ಹೆಸರೂ ನಿನ್ನ ದೊಡ್ಡಜ್ಜಿಯ ಹೆಸರೂ ಒಂದೇ ಎನ್ನುವುದೂ ಅದಕ್ಕೆ ರಾಮ ನನ್ನ ಹೆಸರು ಅಜ್ಜನ ಹೆಸರು ಎಂದು ಉತ್ತರಿಸುವುದು ಮೇಲು ನೋಟಕ್ಕೆ ಕಾದಂಬರಿಯ ವಸ್ತು ವೃತ್ತಾಕಾರವನ್ನು ಅನುಸರಿಸುತ್ತಿದೆ ಎಂದು ಸೂಚಿಸುವುದಾದರೂ ಇಲ್ಲಿ ವೈಚಾರಿಕವಾಗಿ ಮರಳುವಿಕೆಗಿಂತ ಮುನ್ನಡೆಯೇ ಮುಖ್ಯವಾಗಿದೆ. ಕೋಡಿಯಂತಹ ಒಂದು ಸಣ್ಣ ಹಳ್ಳಿಯಿಂದ ಪ್ರಾರಂಭವಾದ ವಸ್ತು ವಿಸ್ತಾರಗೊಳ್ಳುತ್ತಾ ಮಂಗಳೂರು, ಮದ್ರಾಸು, ಬೆಂಗಳೂರು, ಮುಂಬೈ ಮೊದಲಾದ ದೊಡ್ಡ ದೊಡ್ಡ ನಗರಗಳನ್ನೂ ಒಳಗೊಳ್ಳುತ್ತದೆ. ರಾಮ ಮರಳಿ ಬಂದರೂ ರಾಮೈತಾಳರಂತೆ ಪುರೋಹಿತ ವೃತ್ತಿಯನ್ನು ಕೈಗೊಳ್ಳುವುದಿಲ್ಲ. ಅವನೊಬ್ಬ ಶಿಕ್ಷಕ. ಅದಕ್ಕೂ ಹೆಚ್ಚಾಗಿ ಕಲಾವಿದರಾಮ ವಿಶಾಲವಾದ ಕ್ಷಿತಿಜಕ್ಕೂ ರಾಮೈತಾಳರ ಸೀಮಿತ ಕಾರ್ಯಕ್ಷೇತ್ರಕ್ಕೂ ಇದ್ದ ಅಂತರವನ್ನೇ ಅವರಿಬ್ಬರ ಮನೋಧರ್ಮದಲ್ಲಿ ಮೌಲ್ಯಗಳಲ್ಲಿ ಅನುಭವದ ಮಟ್ಟದಲ್ಲಿ ನಾವು ಕಾಣಬಹುದು. ರಾಮನ ಸಂವೇದನೆಯು ಆಧುನೀಕತೆಯನ್ನಾಗಲಿ ನಾವು ರಾಮೈತಾಳರಲ್ಲಿ ನಿರೀಕ್ಷಿಸುವಂತಿಲ್ಲ. ಈ ಅಂಶವನ್ನು ಕಾರಂತರು ಬಹು ಚೆನ್ನಾಗಿ ಗಮನಿಸಿದ್ದಾರೆ. ಒಂದು ಉದಾಹರಣೆಯನ್ನು ಕೊಡುವುದಾದರೆ ರಾಮನನ್ನು ಕಲಾವಿದನನ್ನಾಗಿ ಮಾಡುವ ಅವನ ಸಮುದ್ರದ ಅನುಭವವನ್ನು ಇಲ್ಲಿ ನೆನೆಯಬಹುದು.

"ರಾಮ ಈಚೆಂದ ಆಚೆಗೆ ನಿಸರ್ಗದ ಶಾಂತಿಯಿಂದ ರೌದ್ರಕ್ಕೆ ಕಣ್ಣು ತಿರುಗಿಸಿ ನೋಡುತ್ತಲೇ ಇದ್ದನು. ಆ ರಾತ್ರಿಯೆಲ್ಲ ಅವನು ಮೂಕನಾಗಿದ್ದನು. ಅವನ ಕಣ್ಣುಗಳ ಮುಂದೆ ಅಂದಿನ ಸಂಜೆಯ ಕಡಲು ನಿಂತ ನೀರುಗಳೇ ಕುಣಿದಾಡುತ್ತಿದ್ದವು. ಮರುದಿನ ಬೆಳಿಗ್ಗೆ ಅವನು ಮನೆಯ ಚಾವಡಿಯಲ್ಲಿ ಕಾಗದವನ್ನು ಬಿಡಿಸಿ ತನ್ನ ಹಿಂದಣ ಸಂಜೆಯ ಕನಸನ್ನು ಬರೆಯುತ್ತಿದ್ದನು. ದೆವ್ವದಂತಹ ನಾಲ್ಕು ಹನೆ ಮರಗಳು ನೆಲದಿಂದ ಬಾನನ್ನು ಸೀಳಿದ್ದವು ಎದುರಿಗೆ ಕಾಲಬುಡದಲ್ಲಿ ನಗುವ ಮೋಡಗಳನ್ನು ಬಿಂಬಿಸುತ್ತಿದ್ದ ವಿಶಾಲವಾದ ನೀರಿನ ಹೊಳೆಯೊಂದಿತ್ತು.

ಅದರಿಂದಾಚೆ ಕಡಲದಿನ್ನೆ ಮುಂದೆ ರೌದ್ರವಾಗಿ ಹುಚ್ಚೆದ್ದು ನಗುತ್ತಿರುವ ಅಲೆಗಳು, ಅದರ ತೀರ ತೀರ ಹಿಂದುಗಡೆಯಲ್ಲಿ ಬಾನನ್ನು ಹೊಂಬೆಳಗಿನ ಆಗರವನ್ನಾಗಿ ಮಾಡಿದ ಸೂರ್ಯನ ಲೀಲೆ - ಅವನ ಹುಚ್ಚಿನ ಆಟವು ಸಾಗಿತ್ತು ಎಂದು ಲೇಖಕರು ತಮ್ಮ ಕಾದಂಬರಿಯ ಒಂದು ಭಾಗದಲ್ಲಿ ಹೇಳಿದ್ದಾರೆ. ರಾಮನಿಗೆ ಇಂಥ ಅರಿವು, ಆಧ್ಯಾತ್ಮಿಕತೆ ಅಭಿವ್ಯಕ್ತಿಯಲ್ಲಿನ ಯಶಸ್ಸು ಸಂಸ್ಕೃತಿಯ ಲಕ್ಷಣಗಳಾಗಿದ್ದರೆ ಈ ವಿಷಯದಲ್ಲಿ ರಾಮೈತಾಳರಿಗಿಂತ, ಲಚ್ಚನಿಗಿಂತ, ರಾಮ ಬಹುದೂರ ಹೋಗಿದ್ದಾನೆ. ಒಟ್ಟಿನಲ್ಲಿ ಕುರ್ತು ಕೋಟಿಯವರು ಹೇಳುವಂತೆ ಕಾದಂಬರಿಯ ವಸ್ತು

/

ಗಟ್ಟಿತನದಿಂದ ಕೂಡಿದ್ದು, ಆ ಗಟ್ಟಿತನದಿಂದಲೇ ಈ ಕಾದಂಬರಿಯು ಇಂದಿನವರೆಗೂ ಗಟ್ಟಿಯಾಗಿ ಉಳಿದಿವೆ ಎಂದು ನಾನು ಭಾವಿಸುತ್ತೇನೆ.

## ಭಾಷೆ :

ಶಿವರಾಮ ಕಾರಂತರು ರಚಿಸಿರುವ ಕಾದಂಬರಿಗಳ ಭಾಷೆ ತುಂಬ ವೈವಿಧ್ಯಮಯವೂ, ವಿಶಿಷ್ಟವೂ ಆಗಿದೆ. "ಭಾಷೆಯು ಮನುಷ್ಯರಲ್ಲಿ ಸಂವಹನ ಸಂಬಂಧ ಮತ್ತು ಸಂಪರ್ಕವನ್ನು ಬೆಳೆಸಲು ರೂಪಿಸಿಕೊಂಡ ಒಂದು ಮೌಖಿಕ ಮಾಧ್ಯಮ. ಮನುಷ್ಯ ಎಷ್ಟೇ ದೂರದಲ್ಲಿರಲಿ ಈ ಭಾಷಾ ಮಾಧ್ಯಮದಿಂದ ತೀರ ಹತ್ತಿರವಾಗಿದ್ದಾನೆ. ಒಂದು ಪತ್ರ ದೂರವನ್ನೂ ಹತ್ತಿರವಾಗಿಸುವ ಸಾಧನ. ಅದರಲ್ಲಿಯ ಭಾಷಾ ಮಾಧ್ಯಮದಿಂದಲೇ ಸಾಧ್ಯವಾಗುವಂತಹುದು. ಮನುಷ್ಯನ ದೈನಂದಿನ ಚಟುವಟಿಕೆಗಳಿಗೆ ಈ ಭಾಷೆಯು ಮಾಧ್ಯಮವಾದಂತೆ, ಸಾಹಿತಿಗೂ ತನ್ನ ಭಾವನೆಗಳನ್ನೂ ಸೊಗಸಾಗಿ ಅಭಿವ್ಯಕ್ತಿಪಡಿಸಲು ಭಾಷೆ ಮುಖ್ಯ. ಬಳಸಿದ ಭಾಷೆಯು ಸತ್ವಭರಿತವಾದಷ್ಟು ಕೃತಿಯು ಸತ್ವಭರಿತವಾಗಿರುತ್ತದೆ. ಸಾಹಿತಿಗೆ ಅಭಿವ್ಯಕ್ತಿ ಮಾಧ್ಯಮಕ್ಕೆ ಭಾಷೆಯನ್ನು ಬಳಸಲು ಸಂಪೂರ್ಣ ಸ್ವಾತಂತ್ರ್ಯವಿರುತ್ತದೆ. ಅದು ಗ್ರಾಂಥಿಕ ಭಾಷೆಯಾಗಿರಬಹುದು ಇಲ್ಲವೆ ಗ್ರಾಮ್ಯ ಭಾಷೆಯಾಗಿರಬಹುದು ಅದನ್ನು ಬಳಸುವ ಸಾಹಿತಿಯ ಪ್ರಯೋಗಶೀಲತೆಯನ್ನು ಅವಲಂಬಿಸಿರುತ್ತದೆ. ಕಾರಂತರ ಕಾದಂಬರಿಗಳಲ್ಲಿ ಮುಖ್ಯವಾಗಿ ಗ್ರಾಂಥಿಕ ಮತ್ತು ಗ್ರಾಮೀಣ ಭಾಷೆಯು ಸತ್ವಭರಿತವಾಗಿ ಬಳಕೆಯಾಗಿರುವುದನ್ನು ಅಧ್ಯಯನದಿಂದ ಕಂಡುಕೊಳ್ಳಬಹುದು.

ಕಾದಂಬರಿ ಎನ್ನುವುದು ಬದುಕಿನ ಯಥಾರ್ಥವಾದ ಚಿತ್ರವನ್ನು ಕಟ್ಟಿಕೊಡುತ್ತದೆ. ಸಾಹಿತ್ಯ ಪ್ರಕಾರವಾದ ಪದ್ಯಕ್ಕಿಂತ ನೇರವಾಗಿ ಸುಲಭವಾಗಿ ಜನಪ್ರಿಯವಾಗುವುದು ಕಾದಂಬರಿಯ ಭಾಷೆ. ಡಾ|| ಜಿ. ಎಸ್. ಶಿವರುದ್ರಪ್ಪನವರು "ಕಾವ್ಯದ ಭಾಷೆ ಎಷ್ಟಾದರೂ ವ್ಯಾವಹಾರಿಕ ಭಾಷೆಗೆ ಕೊಂಚ ಎತ್ತರ. ಕಾದಂಬರಿಯ ಭಾಷೆ ಹತ್ತಿರ"[೯] ಎಂಬ ಅಭಿಪ್ರಾಯ ಕಾದಂಬರಿಯ ಶ್ರೇಷ್ಠತೆಯನ್ನು ತೋರಿಸುತ್ತದೆ. ಕಾರಂತರ ಕಾದಂಬರಿಯನ್ನು ಅಧ್ಯಯನ ಮಾಡುತ್ತಾ ಹೋದಾಗ "ತಾನು ಕಂಡ ಬದುಕನ್ನು ತನ್ನದೇ ಆದ ಭಾಷೆಯಲ್ಲಿ ಚಿತ್ರಿಸಬೇಕಾದರೆ ಕಾದಂಬರಿಕಾರನ ಕಿವಿ ತನ್ನ ಸುತ್ತಣ ಜನ ಭಾಷೆಯ ಬಗೆಗೆ ಸದಾ ತೆರೆದಿರಬೇಕಾಗುತ್ತದೆ. ಆ ಭಾಷೆಯು ನಾದ, ಲಯ, ಅರ್ಥ, ಧ್ವನಿ ಇವುಗಳ ಹರಹನ್ನು ಗುರುತಿಸಬಲ್ಲವನಾಗಿರಬೇಕು. ವ್ಯಕ್ತಿ ವ್ಯಕ್ತಿಗಳ ಪ್ರಾದೇಶಿಕ ಪರಿಸರಕ್ಕನುಸಾರವಾಗಿ ಸ್ವಭಾವ, ಸಂಸ್ಕಾರಗಳಿಗನುಸಾರವಾಗಿ ಮಾತಿನ ರೀತಿ ಹೇಗೆ

ವ್ಯತ್ಯಾಸವಾಗುತ್ತದೆ ಎನ್ನುವುದನ್ನು ಗಮನಿಸಬೇಕಾಗುತ್ತದೆ. ಒಟ್ಟಿನಲ್ಲಿ ಕಾದಂಬರಿಕಾರ ಆ ಬದುಕಿನಲ್ಲಿ ಬೇರೂರಿ ಬೆಳೆದವನಾಗಿರಬೇಕು. ಅಂಥವನು ತನ್ನ ಜನಭಾಷೆಯ ಜಾಯಮಾನವನ್ನು ವ್ಯಕ್ತಿ ವಿಶಿಷ್ಟವಾದ ರೀತಿಯಲ್ಲಿ ರೂಪಿಸಿ ಅದು ತನ್ನದೇ ಆದ ಶೈಲಿ ಎನ್ನುವ ಅನುಭವವನ್ನು ಓದುಗರಿಗೆ ತಂದುಕೊಟ್ಟಾನು"೧೦ ಈ ಅಭಿಪ್ರಾಯವು ಕಾರಂತರ ಕಾದಂಬರಿಗೆ ಹೆಚ್ಚು ಯಥಾರ್ಥತೆಯನ್ನು ತಂದುಕೊಡುತ್ತದೆಂದು ಭಾವಿಸಬಹುದು. ಕಾದಂಬರಿಕಾರರು ಬೇರೂರಿದ್ದ ಪ್ರದೇಶದ ಭಾಷೆಯನ್ನು ಬಳಸಿರುವುದು ಅವರ ಕಾದಂಬರಿಯನ್ನು ಅಧ್ಯಯನ ಮಾಡಿದಾಗ ಗೋಚರಿಸದೆ ಇರದು.

ಕಾರಂತರ ಕಾದಂಬರಿಗಳ ಭಾಷೆಯನ್ನು ಅವಲೋಕಿಸಿದಾಗ ತುಂಬ ವೈವಿಧ್ಯತೆಯನ್ನು ಪಡೆದುಕೊಂಡಿರುವುದರ ಜೊತೆಗೆ ಕಾದಂಬರಿಯಿಂದ ಕಾದಂಬರಿಗೆ ಹೆಚ್ಚು ಪರಿಪಕ್ವತೆಯನ್ನು ಪಡೆದುಕೊಂಡಿದೆ ಎಂದು ಹೇಳಬಹುದು. ಏಕೆಂದರೆ ಆರಂಭದ ಕಾದಂಬರಿಗಳಾದ 'ವಿಚಿತ್ರಕೂಟ', 'ದೇವದೂತರು', 'ಭೂತ' ಇತ್ಯಾದಿಗಳನ್ನು ಗಮನಿಸಿದಾಗ ಅದರ ಅರಿವು ಸ್ಪಷ್ಟವಾಗುತ್ತದೆ. ಕಾರಂತರ ಕಾದಂಬರಿಗಳ ಭಾಷೆಯ ಮತ್ತೊಂದು ವಿಶೇಷವೆಂದರೆ ಸಾಮಾನ್ಯವಾಗಿ ಎಲ್ಲ ವರ್ಗದ ಓದುಗರನ್ನು ಸುಲಭವಾಗಿ ತಲುಪುವಲ್ಲಿ ಯಶಸ್ವಿಯಾಗಿದೆ. ಕನ್ನಡ ನವ್ಯ ಸಾಹಿತ್ಯದ ಸಂದರ್ಭದಲ್ಲಿ ಕಾದಂಬರಿಕಾರರ ಭಾಷೆಯನ್ನು ಅವಲೋಕಿಸಿದಾಗ ಸಾಮಾನ್ಯ ವರ್ಗದ ಓದುಗರನ್ನು ತಲುಪುವಲ್ಲಿ ಅದು ಹೆಚ್ಚಿನ ಸಫಲತೆಯನ್ನು ಪಡೆದಿಲ್ಲ. ಕಾರಣ ಅವರು ಬಳಸಿರುವ ಬರಹದ ಭಾಷೆಯ ತಂತ್ರ ಎಂದು ಹೇಳಬಹುದು. ಆದರೆ ಕಾರಂತರ ಕಾದಂಬರಿಗಳ ಭಾಷೆ ಅದಕ್ಕೆ ವ್ಯತಿರಿಕ್ತವಾಗಿ ಸಾಮಾನ್ಯ ಓದುಗನಿಂದ ಹಿಡಿದು ಬೌದ್ಧಿಕವಾಗಿ ಹೆಚ್ಚು ಪಾಂಡಿತ್ಯವನ್ನು ಪಡೆದ ವಿದ್ವಾಂಸರನ್ನು ಒಳಗೊಂಡು ಹೆಚ್ಚು ಮನ್ನಣೆಯನ್ನು ಪಡೆದುಕೊಂಡಿದೆ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ.

ಅಂತಹ ಕಾದಂಬರಿಗಳಲ್ಲಿ 'ಮರಳಿ ಮಣ್ಣಿಗೆ' ಕಾದಂಬರಿಯು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಈ ಕಾದಂಬರಿಯಲ್ಲಿ ಗ್ರಾಂಥಿಕ, ಗ್ರಾಮ್ಯ ಎರಡು ಭಾಷೆಯನ್ನು ಕಾಣಬಹುದು. ಆದರೆ ಯಾವುದೇ ಕಾದಂಬರಿಯನ್ನು ತೆಗೆದುಕೊಂಡಾಗ ಪ್ರಧಾನವಾಗಿ ಗ್ರಾಂಥಿಕ ಭಾಷೆಯು ಕಂಡುಬರುತ್ತದೆ. ಅವಶ್ಯಕತೆಯಿದ್ದ ಕಡೆ ಕಡಿಮೆ ಪ್ರಮಾಣದಲ್ಲಿ ಗ್ರಾಮ್ಯ ಭಾಷೆಯು ಕಂಡುಬರುತ್ತದೆ. ಕರಾವಳಿಯ ಕನ್ನಡ, ಹವ್ಯಕ ಕನ್ನಡ ಮತ್ತು ಅಲ್ಲಿನ ಸಾಮಾನ್ಯ ಜನತೆಯು ಮಾತನಾಡುವಂತಹ ಭಾಷೆಯು ಮುಖ್ಯವಾಗಿ ಕಂಡುಬರುತ್ತದೆ.

'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ರಾಮನು ಮಾತನಾಡುವ ಸನ್ನಿವೇಶವನ್ನು ಗಮನಿಸುವುದು ಸೂಕ್ತವೆಂದು ತೋರುತ್ತದೆ. ಮದ್ರಾಸಿನಲ್ಲಿ ರಾಮ ಬಿ.ಎ. ಓದುತ್ತಿದ್ದಾಗ ಸತ್ಯಾಗ್ರಹದಲ್ಲಿ ಪಾಲ್ಗೊಂಡು ಸೆರೆಮನೆ ವಾಸವನ್ನು ಕಂಡ ಸಂದರ್ಭದ ಚಿತ್ರಣ. "ಇತ್ತ ದೇಶಭಕ್ತನಾದ ರಾಮನು ಇನ್ನಷ್ಟು ರಾಷ್ಟ್ರಾಭಿಮಾನದಿಂದ ಕುದಿದನು. ವೆಲ್ಲೂರಿನ ಕಾರಾಗೃಹ ಆಗೊಂದು ಖಾದಿಯ ಸಂತೆಯಾಗಿತ್ತು. ಸಂತೆಯೊಳಗಿನದೇ ಶಿಸ್ತು. ಅದೇ ಬೊಬ್ಬೆ – ಬೊಬ್ಬೆಯಿಂದ ಸ್ವರಾಜ್ಯ ಸಿಗುವಂತಾಗಿದ್ದರೆ ದಿನಕ್ಕೆ ಅವರು ಕೂಗಿದ ಇಂಕ್ವಿಲಾಬ್, ಜಿಂದಾಬಾದ್ ಗಳಿಂದಾಗಿಯೇ, ಗಾಂಧೀ ಕೀ ಜೈ ಗಳಿಂದಾಗಿಯೇ ಹತ್ತು ಭಾರಿಯಾದರೂ ಸ್ವರಾಜ್ಯ ಕೈಗೆ ಬಂದು ಇಳಿಯಬೇಕಿತ್ತು. ಅಲ್ಲಿ ನಾನಾ ಊರಿನವರು ಕಲೆತರು. ಹೀಗೆಯೇ ಜೈಲು ತುಂಬಿದುದಾದರೆ ಮುಂದಿನ ವರ್ಷದೊಳಗೆ ಬ್ರಿಟನ್ ಧ್ವಂಸವಾಯಿತೆಂದೇ ತಿಳಿದಿದ್ದರು. ಬಹು ಜನರ ತೀರ್ಮಾನಕ್ಕೆ ರಾಮನ ಭಾವತಿರೇಕ ತಲೆ ಬಾಗಿತ್ತು.

ಇತ್ತ ಸೆರೆಯಾಳುಗಳಿಂದ ಜೈಲು ಬಿರಿಯುವಂತಾಯಿತು. ಅವರು ಕೈದಿಗಳಿಗೆ ಕೊಡುವ ಅನ್ನಾಹಾರಗಳು ತೀರ ಬಡಕೂಲಿಗಳಿಗೆ ಕೊಡುವಂತಹ ಆಹಾರಕ್ಕಿಂತ ಉತ್ತಮವಾಗಿರಲಿಲ್ಲ. ಅಲ್ಲಿನ ಬಂದಿಗಳನ್ನು ಇದು ಮತ್ತಷ್ಟು ಉದ್ವೇಗಕ್ಕೆ ಗುರಿ ಮಾಡಿತ್ತು. ಊಟಕ್ಕೆ ಮುಷ್ಕರ ಹೂಡುವ ಹಠವಾಯಿತು. ಅಧಿಕಾರಿಗಳು ಇಳಿದರು. ತುಸು ಉತ್ತಮ ಅನ್ನವನ್ನು ಒದಗಿಸಿಕೊಟ್ಟರು".೧೧ ಇಲ್ಲಿ ಬಳಸಿರುವ ಭಾಷೆಯು ಗ್ರಾಮ್ಯ ಮತ್ತು ಗ್ರಾಂಥಿಕವಾಗಿ ಬಳಸಿರುವುದರ ಜೊತೆಗೆ ಕಾದಂಬರಿಕಾರರು ತಮ್ಮ ವಿಚಾರಗಳನ್ನು ಅಭಿವ್ಯಕ್ತಪಡಿಸಲು ಅವಶ್ಯಕವಾದ ಭಾಷೆಯನ್ನು ಬಳಸಿರುವರು. ಇಲ್ಲಿ ರಾಮನು ಸತ್ಯಾಗ್ರಹದಲ್ಲಿ ಪಾಲ್ಗೊಂಡು ಸೆರೆಮನೆ ವಾಸವನ್ನು ಅನುಭವಿಸುವುದು ಮತ್ತು ಅಲ್ಲಿನ ಘಟನೆಗಳನ್ನು ಕುರಿತಂತೆ ಕಾದಂಬರಿಕಾರರು ಇಲ್ಲಿ ಹೇಳುವರು. ಒಂದು ನಗರದ ಸಂದರ್ಭದಲ್ಲಿ ಬಳಕೆಯಾಗುವ ಭಾಷೆಯನ್ನು ಸಹ ಇಲ್ಲಿ ಮುಖ್ಯವಾಗಿ ಗಮನಿಸಬಹುದು.

ಮದ್ರಾಸಿನಿಂದ ರಾಮ ತನ್ನ ಊರಾದ ಕೋಡಿಗೆ ಬಂದಾಗ ಅಲ್ಲಿ ತಾಯಿಯಾದ ನಾಗವೇಣಿ ಮತ್ತು ರಾಮ ಇವರ ಮಧ್ಯೆ ನಡೆಯುವ ಮತುಕತೆ "ತನ್ನ ಮನೆಯ ಮುಂದುಗಡೆ ಬಂದವನೇ ರಾಮನು ಎಳೆಗರುವಿನಂತೆ ಕೂಗಿದನು. ಅಂಬಾ ಎಂದು ತಾಯಿಯನ್ನು ಅಣಕವಾಡಿದನು. ಅರೆ! ತುಂಗೆಯನ್ನು ಬಿಟ್ಟಿತ್ತೇ? ಕಟ್ಟಿರಲಿಲ್ಲವೇ– ಹಾಲು ಉಂಡಿತೇನೋ! ಎಂದು ನಾಗವೇಣಿಯು ಕೆಲಸದಿಂದ ಎದ್ದು ಅಂಗಳಕ್ಕೆ ಬಂದರೆ ಇದು ಕಪಿಲೆ ದನದ ಮೊಮ್ಮಗುವಾದ ತುಂಗೆಯಲ್ಲ, ಸ್ವತ: ತನ್ನ ಕರು ರಾಮ! ಎಂದು ಅವಳು ಗುರುತಿಸುವುದೂ! ಅಮ್ಮಾ ಎಂದೂ ಇವನು ಕೂಗುವುದು ಒಂದು ನಾದವಾಗಿ ಕಂಡಿತು. ಊಟವಾಯಿತೇ? ಬೇಡ,

ಐರೋಡಿ ಅಜ್ಜನಲ್ಲಿ ಫಲಹಾರವಾಯಿತು"[೧೨] ಹೀಗೆ ಇಲ್ಲಿನ ಭಾಷೆಯು ಇಲ್ಲಿನ ಸಂದರ್ಭಕ್ಕೆ ಹೆಚ್ಚು ಅನ್ವಯವಾಗುತ್ತದೆ. ಆಂದರೆ ಭಾಷೆಯು ಆಯಾ ಪರಿಸರ, ಸಂದರ್ಭ ಮತ್ತು ವ್ಯಕ್ತಿಗಳಿಗೆ ಅನುಗುಣವಾದ ಭಾಷೆಯನ್ನು ಕಾರಂತರ ಕಾದಂಬರಿಯಲ್ಲಿ ಕಾಣಬಹುದು.

ಗೋಪಾಲಕೃಷ್ಣ ಅಡಿಗರು ಕಾದಂಬರಿಯ ಭಾಷೆಯನ್ನು ಕುರಿತಂತೆ "ಈ ಭಾಷೆ ಅತ್ಯಂತ ಸರಳವಾದುದು. ಕಾವ್ಯ ಮಯತೆಯಿಂದ ಸಂಪೂರ್ಣ ಸ್ವತಂತ್ರವಾಗಿರುವ ಶುದ್ಧ ಗದ್ಯ. ಆಡುಮಾತಿಗೆ ಹತ್ತಿರವಾದದ್ದು. ಆದರೆ ನಾನಾ ಸಂದರ್ಭ, ಸನ್ನಿವೇಶ, ಪಾತ್ರಗಳ ನಿರ್ಮಾಣಕ್ಕೆ ಸಮರ್ಥವಾಗುವಷ್ಟು ಗಟ್ಟಿತನವನ್ನೂ ವಿಸ್ತರಣ ಆ ಕುಂಚನ ಶಕ್ತಿಯನ್ನು ತೋರುವಷ್ಟು ಸಂಸ್ಕಾರ ಪಡೆದದ್ದು"[೧೩]

ಈ ಮೇಲಿನ ಅಭಿಪ್ರಾಯಕ್ಕೆ ಕೆಲವು ಮಾತುಗಳನ್ನು ಕಾದಂಬರಿಯಿಂದ ನೋಡಬಹುದು.

"ಸರಿ ಆ ದಿನ ಸಂಜೆ, ಐತಾಳರು ಮನೆಯ ಕಡೆಗೆ ಸಾಗಿದಾಗಹಿಗ್ಗು ಅಷ್ಟಿಷ್ಟಲ್ಲ. ತಾನೇ ಮಗನಾಗಿ ತಾನೇ ತಹಶೀಲ್ದಾರನಾಗಿ ಜಗತ್ತನ್ನು ತುಳಿದಾಡುವಂತೆ ಅವರ ಮನಸ್ಸು ಉಲ್ಲಾಸದಿಂದ ಕುಣಿದಾಡುತ್ತಿತ್ತು. ಅವರು ಅಳಿವೆಯನ್ನು ದಾಟುವಾಗ ಬಣ್ಣದ ಮೋಡಗಳು ತೆರೆತೆರೆಯಾಗಿ ಬಾನಲ್ಲಿ ಉರುಳುತ್ತಿದ್ದವು. ನಗುವ ನೀರಿನ ಅಲೆಗಳ ಕುಡಿಗಳು, ಸೂರ್ಯನ ಜಾಳದಿಂದ ಕತ್ತಿಯ ಧರೆಗಳಾಗಿ ಹೊಳೆ ಹೊಳೆದು ಮಾಯವಾಗುತ್ತಿದ್ದವು. ನದಿಯ ನೀರು ಬಲು ತುಷ್ಠಿಯಿಂದ ತುಂಬಿ ಓಲಾಡಿ, ಕಡಲನ್ನು ಚುಂಬಿಸುತ್ತಿತ್ತು. ಅದನ್ನು ನೋಡುತ್ತಾ ಆಕಾಶದಲ್ಲೇ ಅರಮನೆ ರಚಿಸಿ, ಐತಾಳರು ಮುಂದೆ ಸಾಗಿದರು. ದೋಣಿಯವನು ಈಚೆಯ ದಡಕ್ಕೆ ಅವರನ್ನು ತಂದಿಳಿಸಿ 'ಅಯ್ಯಾ ಗೋಡಿ ಬಂತಲ್ಲ' ಇಳಿಯಿರಿ' ಎಂದು ಅನ್ನುವ ತನಕವೂ ಅವರಿಗೆ ಮೈ ಎಚ್ಚರವಿರಲಿಲ್ಲ. ಹಾಗೆಯೇ ಇಳಿದರು. 'ಹಾಂ' ಎಷ್ಟು ಬೇಗನೆ ಅಳಿವೆ ದಾಟಿತು! ಎಂದು ನಕ್ಕು ಮುಂದಕ್ಕೆ ಕಾಲಿಟ್ಟರು. ಅವರು ನಕ್ಕಂತೆ ಕಡಲಿನ ತೆರೆಗಳೂ ನಗುತ್ತಿದ್ದವು. ಐತಾಳರು ಉತ್ಸಾಹಿತರಾಗಿ ತಮ್ಮ ಮನೆಯ ಹಾದಿಯನ್ನು ಹಿಡಿದರು"[೧೪] ಈ ಸಾಲುಗಳು ತಮ್ಮ ಮಗ ಲಚ್ಚನಿಗೆ ತಮ್ಮ ಮಾವನ ಮನೆ ಪಡುಮುನ್ನೀರಿನಲ್ಲಿ ಶಾಲೆಗೆ ಹೋಗಿ ಇಂಗ್ಲೀಷ್ ಕಲಿಯಲು ಏರ್ಪಾಟು ಮಾಡಿ ಬಂದಿದ್ದರಿಂದ ಐತಾಳರಿಗೆ ಆದ ಮನ: ಸಮಾಧಾನ ಸಂತೋಷಗಳನ್ನು ಪ್ರಕೃತಿ ಚಿತ್ರಗಳ ಮೂಲಕ ವ್ಯಕ್ತಪಡಿಸುತ್ತವೆ. ಆದರೆ ಇಲ್ಲಿ ಎಲ್ಲೂ ಗದ್ಯಕ್ಕೆ ಸಲ್ಲದ ಕಾವ್ಯಮಯತೆಯಾಗಲಿ. ಕೇವಲ ನೀರಸವಾದ ಕಥಾ ಶರೀರಕ್ಕೆ ಅಸಂಗತವಾದ ವಸ್ತುಸ್ಥಿತಿ ವರ್ಣನೆಯಾಗಲೀ ಇಲ್ಲ ಎಂಬುದನ್ನು ಗಮನಿಸಬೇಕು.

ಕಾರಂತರು ಕಾದಂಬರಿಗಳಲ್ಲಿ ಸಮಯ ಸನ್ನಿವೇಶಗಳಿಗೆ ತಕ್ಕಂತೆ ಬಳಸಿರುವ ಭಾಷೆಯನ್ನು ಸರಸೋತಿ, ಪಾರ್ವತಿಯರ ಸಂಭಾಷಣೆಗಳಿಂದಲೂ ತಿಳಿದುಕೊಳ್ಳಬಹುದು. ಕಾದಂಬರಿಕಾರರು ಇಂತಹ ಭಾಷೆಯನ್ನು ಬಳಸಬೇಕಾದರೆ ಆ ಪ್ರಾಂತ್ಯದ ಭಾಷೆಯನ್ನು ರಕ್ತಗತ ಮಾಡಿಕೊಂಡಿರುವುದು ಕಾದಂಬರಿಯ ಅಧ್ಯಯನದಿಂದ ತಿಳಿದುಕೊಳ್ಳಬಹುದು.
ಕಾದಂಬರಿಯ ಭಾಷೆ, ಪಾತ್ರ, ಸನ್ನಿವೇಶಗಳಿಗೆ ತಕ್ಕಂತೆ ಹೊಂದಿಕೊಳ್ಳುತ್ತದೆ. ಅದಕ್ಕೆ ಕಾದಂಬರಿಯಲ್ಲಿ ಮತ್ತಷ್ಟೂ ಉದಾಹರಣೆಗಳನ್ನು ನೋಡಬಹುದು.



## ತಂತ್ರ:

ಮರಳಿ ಮಣ್ಣಿಗೆ ಕನ್ನಡದ ಉತ್ತಮ ಕಾದಂಬರಿಗಳಲ್ಲಿ ಒಂದೆಂದು ನಿರ್ವಿವಾದವಾಗಿ ಪರಿಗಣಿಸಬಹುದು. ಇದಕ್ಕೆ ಕಾರಣಗಳು ಇಲ್ಲದಿಲ್ಲ. ಕಾದಂಬರಿಯಲ್ಲಿ ಬರುವ ಪಾತ್ರಗಳಾಗಲಿ ಅವರು ಬಳಸುವ ಭಾಷೆಯಾಗಲಿ, ನಿರೂಪಣಾ ತಂತ್ರವಾಗಲಿ ಪ್ರಾದೇಶಿಕತೆಯ ವಿವರಗಳು ಬಹು ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡು ಕಾದಂಬರಿಯು ಇಂದಿನ ತನಕವು ಅತ್ಯುತ್ತಮ ಎಂಬ ಹಣೆ ಪಟ್ಟಿಯನ್ನು ಕಟ್ಟಿಕೊಂಡಿದೆಯೆಂದು ಭಾವಿಸಬಹುದು.

ಕಾರಂತರ ಕಾದಂಬರಿಗಳ ಬಗ್ಗೆ ಮತ್ತೆ ಮತ್ತೆ ಕೇಳಿಬರುವು ಮಾತುಗಳೆಂದರೆ "ಅವರು ಭಾಷೆಯನ್ನು ವಿಶೇಷ ಪ್ರಜ್ಞೆಯಿಂದ ಬಳಸಲಿಲ್ಲಾ ಎಂಬುದು ಹಾಗೂ ತಂತ್ರದ ವಿಷಯದಲ್ಲಿ ಅವರು ವಿಶೇಷ ಮಹತ್ವಾಕಾಂಕ್ಷೆಯನ್ನು ತೊರಿಸಲಿಲ್ಲ".೧ ಎಂದು ಕುರ್ತುಕೋಟಿಯವರು ಕಾದಂಬರಿಯ ತಂತ್ರ ಮತ್ತು ಭಾಷೆಯ ಬಗ್ಗೆ ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ತಂತ್ರದ ವಿಚಾರದಲ್ಲಿ ಮಾತ್ರ ಕಾರಂತರು ಎಂದಿಗೂ ತಲೆ ಕೆಡಿಸಿಕೊಳ್ಳದೇ ಸರಳವಾಗಿ ನಿರೂಪಿಸುವ ಪ್ರಯತ್ನ ಮಾಡಿದ್ದಾರೆ ಎಂದು ಕಾದಂಬರಿಯನ್ನು ಅಧ್ಯಯನ ಮಾಡಿದಾಗ ತಿಳಿದು ಬರುವ ವಿಷಯವಾಗಿದೆ.

ಭಾಷೆ ಹಾಗೂ ತಂತ್ರಗಳನ್ನು ಬಿಟ್ಟು ಅದಕ್ಕೆ ಅನ್ಯಮಾರ್ಗವೇ ಇಲ್ಲ. ಇಂತ ಗಟ್ಟಿತನವನ್ನು ಸಮರ್ಥವಾಗಿ ತೋರಿಸಬಲ್ಲ ಭಾಷೆ ಹಾಗೂ ತಂತ್ರಗಳು ತಮ್ಮ ಕೆಲಸವನ್ನು ಸಮರ್ಪಕವಾಗಿಯೇ ನೆರವೇರಿಸಿವೆ ಎಂಬುದು ಕಾಣುತ್ತದೆ. ಭಾಷೆ ಹಾಗೂ ತಂತ್ರಗಳು ಕೇವಲ ಸಾಮಗ್ರಿಯ ವ್ಯವಸ್ಥೆಗೆ ಮಾತ್ರ ಸೀಮಿತವಾಗಿಲ್ಲ, ಲೇಖಕನ ದೃಷ್ಟಿಕೋನದ ಭಾಗವೇ ಆಗಿದೆ, ಒಬ್ಬ ಲೇಖಕನ ಭಾಷೆ ಹಾಗೂ ತಂತ್ರಗಳು ಸಾಕಷ್ಟು ಮಾಹತ್ವಾಕಾಂಕ್ಷೆಯಾಗಿಲ್ಲವೆಂದು ಹೇಳುವಾಗ ಅವನ ದೃಷ್ಟಿ ಕೋನಕ್ಕೂ ಭಾಷೆ ತಂತ್ರಗಳಿಗೂ ಇರುವ ಸಂಬಂಧವನ್ನು ಮರೆತೆ ಬಿಡುತ್ತೇವೆ. ಆದ್ದರಿಂದ ಕಾರಂತರ ಭಾಷೆ ತಂತ್ರಗಳ ಬಗ್ಗೆ ಮಾಡುವ ತೀರ್ಮಾನ ಅವರ ದೃಷ್ಟಿಕೋನದ ಮೇಲೆ ಮಾಡಿದ ತೀರ್ಮಾನವಾಗಿ ಪರಿಗಣಿಸಬಹುದೆಂದು ಭಾವಿಸುತ್ತೇನೆ.

ಕುರ್ತುಕೋಟಿಯವರು "ಈ ಕಾದಂಬರಿಯ ವ್ಯಕ್ತ ರೂಪಕ್ಕಿಂತ ಅದರ ಅವ್ಯಕ್ತತೆ ಹೆಚ್ಚು ಮಹತ್ವದ್ದಾಗಿದೆ. ತಂತ್ರದಲ್ಲಿಯ ಕೌಶಲದ ದೃಷ್ಟಿಯಿಂದ ದೂರ ನಿಂತು ಬರೆದ ಪ್ರಕೃತಿ ಚಿತ್ರದಂತೆ ಕಾದಂಬರಿ ಧ್ವನಿ ಪೂರ್ಣವಾದ ಮೌನದಿಂದ ತುಂಬಿದೆ."[೨] ಎಂದು ಮರಳಿ ಮಣ್ಣಿಗೆ ಕಾದಂಬರಿ ತಂತ್ರದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಒಬ್ಬ ಕಾದಂಬರಿಕಾರನಿಗೆ ತನ್ನ ಕೃತಿಯಲ್ಲಿ ವಿಷಯಗಳ ಅಭಿವ್ಯಕ್ತಿಗಾಗಿ ಬಳಸುವ ಭಾಷೆಯು ಎಷ್ಟು ಮುಖ್ಯವಾಗಿರುತ್ತದೆಯೋ ನಿರೂಪಣಾ ತಂತ್ರವು ಅಷ್ಟೇ ಮುಖ್ಯವಾಗಿರುತ್ತದೆ. ಅದನ್ನು ನಿರೂಪಣಾ ವಿಧಾನ ಎಂದು ಕರೆಯಬಹುದು. ಈ ತಂತ್ರ ಪಕ್ವವಾಗಿಲ್ಲದಿದ್ದಲ್ಲಿ ಆ ಕೃತಿಯು ಓದಿನಲ್ಲಿ ಯಶಸ್ಸು ಕಾಣದು ಹಾಗೆಯೇ ಓದುಗರನ್ನು ಅದು ತಲುಪಲಾರದು. ಆದ್ದರಿಂದಲೆ ಯಾವುದೇ ಸಾಹಿತ್ಯ ಕೃತಿಯ ಬರಹದಲ್ಲಿ ಅಥವ ಕಾದಂಬರಿಯಲ್ಲಿ ನಿರೂಪಣಾ ತಂತ್ರ ಬಹಳ ಪ್ರಮುಖವಾದದ್ದು. ಅದರಲ್ಲೂ ಕಾರಂತರ ಕಾದಂಬರಿಗಳ ನಿರೂಪಣಾ ವಿಧಾನವು ತುಂಬ ವೈವಿಧ್ಯಮಯತೆಯಿಂದ ಕೂಡಿದೆ ಎಂದು ಹೇಳಬಹುದು.

ಈ ತಂತ್ರ ವಿಧಾನವನ್ನು ಕುರಿತ ಅನೇಕ ವಿದ್ವಾಂಸರು ತಮ್ಮದೇ ಆದ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಶೋರರ್‌ರವರ ಪ್ರಕಾರ "ತಂತ್ರವೆಂದರೆ ಲೇಖಕನ ಸಾಮಗ್ರಿಯಾದ ಅನುಭವ ತನ್ನ ಬಗ್ಗೆ ಸರಿಯಾಗಿ ಗಮನ ಕೊಡಲು ಅವನನ್ನು ಒತ್ತಾಯಿಸುವ ಸಾಧನ. ತಂತ್ರವೆಂದರೆ ಲೇಖಕನಿಗೆ ತನ್ನ ವಸ್ತುವನ್ನು

ಅನಾವರಣಗೊಳಿಸಲು, ಶೋಧಿಸಲು, ವಿಕಾಸಗೊಳಿಸಲು, ಅದರ ಅರ್ಥವನ್ನು ಸೂಚಿಸಲು ಹಾಗೂ ಕೊನೆಯದಾಗಿ ವಸ್ತುವನ್ನು ಬೆಲೆ ಕಟ್ಟಲು ಇರುವ ಏಕಮಾತ್ರ ಸಾಧನ."೩. ಎಂದು ಹೇಳುವರು. ಎಸ್.ಎಲ್. ಬೈರಪ್ಪನವರು ನಿರೂಪಣಾ ತಂತ್ರವಿಧಾನವನ್ನು ಕುರಿತಂತೆ ತಮ್ಮದೇ ಆದ ರೀತಿಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. "ತನ್ನಲ್ಲಿರುವ ದ್ರವ್ಯವನ್ನು ಸಂವಹಿಸಲು ಬೇಕಾದ ಪರಿಣಾಮಕಾರಿ ವಿಧಾನವನ್ನೇ ತಂತ್ರವೆನ್ನಬಹುದು."೪ ಅಂದರೆ ನಿರೂಪಣಾ ತಂತ್ರ ವಿಧಾನ ಎನ್ನುವುದು ಯಾವುದೇ ಒಬ್ಬ ಕೃತಿಕಾರ ಒಂದು ಕೃತಿಯನ್ನು ರಚಿಸಲು ಹೊರಟಾಗ ತಾನು ಆಯ್ಕೆ ಮಾಡಿಕೊಂಡಿರುವ ವಸ್ತು ಕಥೆಯನ್ನು ಯಾವ ರೀತಿಯ ತಂತ್ರ ವಿಧಾನಗಳಿಂದ ನಿರೂಪಣೆಯನ್ನು ಮಾಡಿರುವನು ಎಂಬುದನ್ನು ಕುರಿತದ್ದಾಗಿದೆ ಎಂದು ಸಂಕ್ಷಿಪ್ತವಾಗಿ ಹೇಳಬಹುದು ಎನಿಸುತ್ತದೆ.

ಕಾರಂತರ ಕಾದಂಬರಿಗಳ ನಿರೂಪಣಾ ತಂತ್ರ ವಿಧಾನವನ್ನು ಕುರಿತು ಹೇಳುವಾಗ, ಪ್ರತಿಯೊಂದು ಕಾದಂಬರಿಯು ಅದರ ವಸ್ತುವಿಗೆ ಅನುಗುಣವಾಗಿ ವಿಭಿನ್ನವಾಗಿರುವಂತಹ ನಿರೂಪಣಾ ವಿಧಾನವನ್ನು ಅನುಸರಿಸಿ ರಚನೆಯಾಗಿರುವುದು ಸಾಮಾನ್ಯವಾಗಿ ಕಂಡು ಬರುತ್ತದೆ. ವಿಮರ್ಶಕರಾದ ಗಿರಡ್ಡಿ ಗೋವಿಂದರಾಜ ಅವರು ಕಾರಂತರ ಕಾದಂಬರಿಗಳ ನಿರೂಪಣಾ ತಂತ್ರ ವಿಧಾನವನ್ನು ಕುರಿತು ಈ ರೀತಿಯಲ್ಲಿ ಹೇಳುವರು. "ಕಾರಂತರು ತಮ್ಮ ಕಾದಂಬರಿಗಳನ್ನೆಲ್ಲ ಹೆಚಾಗಿ ಸಾಂಪ್ರದಾಯಿಕವಾದ ಸರಳ ನಿರೂಪಣೆಯಲ್ಲಿಯೇ ಬರೆಯುತ್ತಾರೆ. ಕಾಲಾನುಕ್ರಮಣಿಕೆಯಲ್ಲಿ ಸರ್ವಸಾಕ್ಷಿತ್ವ ಪ್ರಜ್ಞೆಯ ಮೂಲಕ ಕಥೆ ಹೇಳುವ ನೇರ ಪದ್ಧತಿಯನ್ನೇ ಅನುಸರಿಸುತ್ತಾರೆ. ಆದರೂ ಈ ಬಗೆಯ ತಂತ್ರದಲ್ಲೂ ಕೂಡ ಸಾಕಷ್ಟು ವೈವಿಧ್ಯವಿದೆ. ವಿಷಯದ ಅನ್ವೇಷಣೆಗೆ ತಕ್ಕ ಹಾಗೆ ತಂತ್ರವು ಬದಲಾಗುತ್ತದೆ."೫ ಎಂದು ಅರ್ಥಪೂರ್ಣವಾಗಿಯೇ ಕಾರಂತರ ತಂತ್ರ ವಿಧಾನವನ್ನು ಕುರಿತು ಅಭಿಪ್ರಾಯ ವ್ಯಕ್ತ ಪಡಿಸುವರು.

ಕಾರಂತರ ಮರಳಿ ಮಣ್ಣಿಗೆ ಕಾದಂಬರಿಯು ಮೂರು ತಲೆಮಾರುಗಳ ಜೀವನ ಚಿತ್ರಣವನ್ನು ಕುರಿತು ಹೇಳುವುದಾಗಿದೆ. ಇಡೀ ಕಾದಂಬರಿಯ ಕಥೆಯನ್ನು ಮೂರು ತಲೆಮಾರುಗಳ ಮೂಲಕ ನಿರೂಪಣೆ ಮಾಡುತ್ತಾ ಹೋಗುವುದು ಕಾದಂಬರಿಕಾರರ ವೈಶಿಷ್ಟ್ಯವಾಗಿದೆ. ಮೊದಲ ತಲೆಮಾರಿನಲ್ಲಿ ರಾಮೈತಾಳ, ಪಾರೋತಿ, ಸರಸೋತಿ, ಸತ್ಯಭಾಮೆ, ಶೀನಮಯ್ಯ. . . . ಇತ್ಯಾದಿ ಪಾತ್ರಗಳನ್ನು

ಕುರಿತಂತೆ ಅಂದಿನ ಸಾಮಾಜಿಕ ಜೀವನದ ಚಿತ್ರಣವನ್ನು ಕಟ್ಟಿಕೊಡುವರು. ಎರಡನೆಯ ತಲೆಮಾರಿನಲ್ಲಿ ರಾಮೈತಾಳ ಮತ್ತು ಶೀನಮಯ್ಯನ ಮಕ್ಕಳು ವಿದ್ಯಾಭ್ಯಾಸವನ್ನು ಪಡೆಯಲು ನಗರಕ್ಕೆ ಹೋಗುವುದು. ಅಂತಹ ಸಂದರ್ಭದಲ್ಲಿ ರಾಮೈತಾಳನ ಮಗ ಲಚ್ಚ ಅನೇಕ ದುಶ್ಚಟಗಳಿಗೆ ಬಲಿಯಾಗುವುದು. ನಾಗವೇಣಿಯನ್ನು ಲಚ್ಚ ವಿವಾಹವಾಗಿ ಆಕೆಯನ್ನು ಸಮಸ್ಯೆಗಳ ಕೂಪಕ್ಕೆ ತಳ್ಳುವುದು. ಶೀನಮಯ್ಯನ ಮಕ್ಕಳು ನಗರ ಪ್ರದೇಶಗಳಲ್ಲಿ ಹೋಟೆಲ್ ಉದ್ಯಮವನ್ನು ಆರಂಭಿಸಿ ಅಪಾರ ಹಣಗಳಿಸುವುದು. ಇನ್ನು ಮುಂತಾದ ಅಂಶಗಳನ್ನು ಈ ತಲೆಮಾರಿನಲ್ಲಿ ಮುಖ್ಯವಾಗಿ ಗುರುತಿಸಬಹುದಾಗಿದೆ. ಮೂರನೇ ತಲೆಮಾರಿನಲ್ಲಿ ಲಚ್ಚ ಮತ್ತು ನಾಗವೇಣಿಯ ಮಗನಾದ ರಾಮ ವಿದ್ಯಾಭ್ಯಾಸಕ್ಕೆಂದು ಮದ್ರಾಸಿಗೆ ಹೊಗುವುದು, ಅಲ್ಲಿ ಬಿ.ಎ., ಓದುತ್ತಿದ್ದಾಗ ಮಹಾತ್ಮಾ ಗಾಂಧೀಜಿಯವರ ವಿಚಾರಗಳಿಗೆ ಪ್ರೇರಿತನಾಗಿ, ದೇಶಸೇವಾ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದು. ಆಗ ಸೆರೆಮನೆ ವಾಸವನ್ನು ಅನುಭವಿಸುವುದು, ದೇಶದ ಸ್ವಾತಂತ್ರ್ಯಕ್ಕೋಸ್ಕರ ತನ್ನ ವಿದ್ಯಾಭ್ಯಾಸವನ್ನು ಕಡೆಗಣಿಸಿ ಚಳುವಳಿಯಲ್ಲಿ ಧುಮುಕುವಂತಹ ರಾಮನ ದೇಶಪ್ರೇಮವನ್ನು ಮುಖ್ಯವಾಗಿ ಗುರುತಿಸಬಹುದು. ಕಾದಂಬರಿಯ ಶಿರ್ಷಿಕೆಯಾದ 'ಮರಳಿ ಮಣ್ಣಿಗೆ' ತುಂಬ ಅರ್ಥಪೂರ್ಣವಾಗಿದೆ. ಏಕೆಂದರೆ ಆಧುನಿಕ ವಿದ್ಯಾಭ್ಯಾಸಕೆಂದು ಹೋದ ಲಚ್ಚನು ಅನೇಕ ದುಶ್ಚಟಗಳಿಗೆ ಬಲಿ ಪಶುವಾದರೆ ರಾಮನು ಲಚ್ಚನಿಗೆ ತದ್ವಿರುದ್ಧವಾಗಿ ವಿದ್ಯಾಭ್ಯಾಸವನ್ನು ಮುಗಿಸಿಯೂ ತನ್ನದೇ ಊರಿಗೆ ಜ್ಞಾನಾರ್ಜನೆಯನ್ನು ಅಲ್ಲಿನ ವಿದ್ಯಾರ್ಥಿಗಳಿಗೆ ಒಬ್ಬ ಉಪಾಧ್ಯಾಯನಾಗಿ ಸೇವೆ ಸಲ್ಲಿಸುವನು. ಹೀಗೆ ಕಾದಂಬರಿಯಲ್ಲಿ ಮೂರು ತಲೆಮಾರುಗಳ ಜೀವನ ಚಿತ್ರಣದಲ್ಲಿ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ವಿಚಾರಗಳನ್ನು ಕುರಿತಂತೆ ಕಾದಂಬರಿಕಾರರ ವಾಸ್ತವ ಅನುಭವದ ನೆಲೆಗಟ್ಟಿನಲ್ಲಿ ಸಾಂಪ್ರದಾಯಿಕ ನಿರೂಪಣಾ ತಂತ್ರದಲ್ಲಿ ವ್ಯಕ್ತವಾಗಿದೆ.

★★★★★★★★

## ಅಡಿಟಿಪ್ಪಣಿಗಳು

| | | |
|---|---|---|
| ೧. | ಗಿರಡ್ಡಿ ಗೋವಿಂದ ರಾಜ: | ಕಾದಂಬರಿ ವಸ್ತು ಮತ್ತು ತಂತ್ರ, ಸ್ನೇಹ ಪ್ರಕಾಶನ, ವಿಜಯನಗರ, ಬೆಂಗಳೂರು, ೧೯೮೭, ಪುಟ-೬೫. |
| ೨. | ಅದೇ ಪುಟ-೬೫. | |
| ೩. | ಶಿವರಾಮ ಕಾರಂತ: | ಮರಳಿ ಮಣ್ಣಿಗೆ ಎಸ್.ಬಿ.ಎಸ್.ಪಬ್ಲಿಷರ್ಸ್‌ಮತ್ತು ಡಿಸ್ಟ್ರಿಬ್ಯೂಟರ್ಸ್, ೧೯೯೦, ಪುಟ-೫೮. |
| ೪. | ಅದೇ ಪುಟ-೬೮. | |
| ೫. | ಅದೇ ಪುಟ-೨೦೫-೨೦೬. | |
| ೬. | ಅದೇ ಪುಟ-೧೯೩. | |
| ೭. | ಅದೇ ಪುಟ-೧೮೦. | |
| ೮. | ಅದೇ ಪುಟ-೩೫೨. | |
| ೯. | ಡಾ॥ ಜಿ. ಎಸ್. ಶಿವರುದ್ರಪ್ಪ : | ಗತಿ ಬಿಂಬ, ಸುರುಚಿ ಪ್ರಕಾಶನ, ಮೈಸೂರು, ೧೯೭೪ , ಪುಟ ೧೦೩. |
| ೧೦. | ಅದೇ ಪುಟ - ೧೦೩ | |
| ೧೧. | ಡಾ॥ ಶಿವರಾಂ ಕಾರಂತ : | ಮರಳಿ ಮಣ್ಣಿಗೆ, ಎಸ್.ಬಿ.ಎಸ್.ಪಬ್ಲಿಷರ್ಸ್‌ಮತ್ತು ಡಿಸ್ಟ್ರಿಬ್ಯೂಟರ್ಸ್, ೧೯೯೦, ಪುಟ ೩೩೬-೩೩೭. |
| ೧೨. | ಅದೇ ಪುಟ - ೩೨೧. | |

೧೩. ಕು. ಶಿ. ಹರಿದಾಸಭಟ್ಟ: (ಸಂ) ಕಾದಂಬರಿ ಪ್ರಪಂಚ , ಗೀತಾಬುಕ್‌ಹೌಸ್, ಮೈಸೂರು,೧೯೬೯, ಪುಟ ೪೭೪,

೧೪. ಶಿವರಾಮ ಕಾರಂತ : ಮರಳಿ ಮಣ್ಣಿಗೆ, ಎಸ್. ಬಿ. ಎಸ್. ಪಬ್ಲಿಷರ್ಸ್ ಮತ್ತು ಡಿಸ್ಟ್ರಿಬ್ಯೂಟರ್ಸ್,೧೯೯೦ , ಪುಟ ೧೩೩.

೧೫. ಕೀರ್ತಿನಾಥಕುರ್ತುಕೋಟಿ: ಯುಗಧರ್ಮಹಾಗೂಸಾಹಿತ್ಯದರ್ಶನ, ಮನೋಹರಗ್ರಂಥಮಾಲೆ, ಧಾರವಾಡ,೧೯೬೨, ಪುಟ, ೨೦೯–೧೦.

೧೬. ಅದೇ ಪುಟ–೨೦೫

೧೭. ಗಿರಡ್ಡಿ ಗೋವಿಂದ ರಾಜ: ಕಾದಂಬರಿ, ವಸ್ತು, ತಂತ್ರ, ಭಾಷೆ, ಸ್ನೇಹ ಪ್ರಕಾಶನ, ಬೆಂಗಳೂರು, ೧೯೮೭, ಪುಟ, ೪.

೧೮. ಡಾ:ಲೀಲಾವತಿ ತೋರಣಗಟ್ಟಿ: ಭೈರಪ್ಪನವರ ಕಾದಂಬರಿಗಳ ಸ್ವರೂಪ, ವಿದ್ಯಾನಿಧಿ ಪ್ರಕಾಶನ, ಗದಗ, ೧೯೯೨, ಪುಟ, ೧೫೯.

೧೯ .ಟಿ.ಪಿ. ಅಶೋಕ: (ಸಂ) ಕನ್ನಡ ಸಾಹಿತ್ಯ ಈ ಶತಮಾನದ ನೋಟ, ಪ್ರಸಾರಂಗ, ಕನ್ನಡವಿಶ್ವವಿದ್ಯಾಲಯ,ಹಂಪಿ,೧೯೯೩ ಪುಟ, ೨೦.




## ಅಧ್ಯಾಯ: ೬

## ಸಮಾರೋಪ

ಶಿವರಾಮ ಕಾರಂತರು ನವೋದಯದ ಅಗ್ರ ಗಣ್ಯರಲ್ಲಿ ಇವರೂ ಒಬ್ಬರು. ನವೋದಯದ ಯುಗ ಪ್ರವರ್ತಕರಾಗುವಂತೆ, ಕನ್ನಡ ಕಾದಂಬರಿ ಪರಂಪರೆಯಲ್ಲಿ ಒಂದು ಯುಗವನ್ನೇ ನಿರ್ಮಿಸಿಕೊಂಡಿದ್ದಾರೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಶಿವರಾಮ ಕಾರಂತರ ಮರಳಿ ಮಣ್ಣಿಗೆ ಎಂಬ ಕಾದಂಬರಿಯನ್ನು ಅಧ್ಯಯನ ಮಾಡುವ ಉದ್ದೇಶದಿಂದ ಆದರ್ಶವಾದಿ, ಮನೋಧರ್ಮದ ನೆಲೆ ಹಾಗೂ ನವೋದಯ ಮತ್ತು ಕಾರಂತ, ಗಂಡು ಹೆಣ್ಣಿನ ಸಂಬಂಧ, ಪ್ರಾದೇಶಿಕತೆಯ ಪ್ರತಿನಿಧೀಕರಣ, ವಸ್ತು ಭಾಷೆ, ತಂತ್ರ ಹೀಗೆ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಆದರ್ಶವಾದದ ಹಿನ್ನೆಲೆಯಲ್ಲಿ ಕಾದಂಬರಿಯ ಹಲವಾರು ಪಾತ್ರಗಳನ್ನು ಪರಿಶೀಲಿಸಲು ಸಾಧ್ಯವಾಗಿದೆ. ಸರಸೋತಿ, ಪಾರೋತಿಯರ ಆದರ್ಶವು ಕಾದಂಬರಿಗೆ ಅಷ್ಟೆಯಲ್ಲದೆ ಇಂದಿನ ಸಮಾಜಕ್ಕೆ ಮಾರ್ಗದರ್ಶಕವಾಗುವುದರಲ್ಲಿ ಸಂಶಯವಿಲ್ಲವೆಂದೆ ಭಾವಿಸಿದ್ದೇನೆ. ಹಾಗೆ ನಾಗವೇಣಿ, ರಾಮನ ಪಾತ್ರಗಳು ಕೂಡ ಇಂದಿನ ಪ್ರಸ್ತುತ ಸಮಾಜದಲ್ಲಿ ಗಂಭೀರವಾದ ಪ್ರಭಾವ ಬೀರುತ್ತವೆ ಎಂಬ ಅಂಶವನ್ನು ಮನಗಂಡಿದ್ದೇನೆ. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದ ಜೀವನವನ್ನು ಕಣ್ಣಾರೆ ಕಂಡು ಅನುಭವಿಸಿದ ಕಾರಂತರು ರಾಮನ ಮೂಲಕ ದೇಶ ಪ್ರೇಮವನ್ನು, ರಾಷ್ಟ್ರೀಯ ಪ್ರಜ್ಞೆಯನ್ನು ಬಿತ್ತುವ ಪ್ರಯತ್ನ ಮಾಡಿದ್ದಾರೆ. ರಾಮನ ಪಾತ್ರದ ಮೂಲಕ ತಮ್ಮ ಅನುಭವಗಳನ್ನು ಎಳೆಎಳೆಯಾಗಿ ಬಿಡಿಸುವ ಪ್ರಯತ್ನವನ್ನು ಕಾದಂಬರಿಯಲ್ಲಿ ಮಾಡಿದ್ದಾರೆ. ವಿದ್ಯಾರ್ಥಿ ದಿಸೆಯಲ್ಲಿಯೇ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ರಾಮ ಪರಕೀಯರ ವಿರುದ್ಧ ದಂಗೆಯೆದ್ದು ಅದನ್ನು ಸಂಪೂರ್ಣವಾಗಿ ನಾಶಗೊಳಿಸುವ ಪ್ರಯತ್ನ ಮಾಡಿದ. ಬಹುಶಃ ಈ ಅಂಶವು ಅಂದಿನ ಸಮಾಜಕ್ಕೆ ಮತ್ತು ಕಾರಂತರಿಗೆ ಅನಿವಾರ್ಯವಾಗಿತ್ತು ಎಂಬ ವಿಚಾರವು ಗೋಚರಿಸುತ್ತದೆ. ಮತ್ತೆ ರಾಮನ ಪಾತ್ರವನ್ನು ಚಿತ್ರಿಸುವಾಗ ಕಾರಂತರ ಮೇಲೆ ನವೋದಯದ ತಾತ್ವಿಕತೆಯ ದಟ್ಟವಾದ ಪ್ರಭಾವ ಬೀರಿರುವುದನ್ನು ಅಧ್ಯಯನದಿಂದ ಕಂಡುಕೊಳ್ಳಬಹುದು.

ಸರಸೋತಿ, ಪಾರೋತಿ, ನಾಗವೇಣಿಯರ ಚಿತ್ರಣವಂತೂ ಪ್ರಸ್ತುತ ಸಮಾಜಕ್ಕೆ ಗಂಭೀರವಾದಂತಹ ಪರಿಣಾಮವನ್ನು ಮತ್ತು ಪ್ರಭಾವವನ್ನು ಬೀರಿ ಸಂಪೂರ್ಣವಾಗಿ ಹದಗೆಡುತ್ತಿರುವ ಸಮಾಜವನ್ನು ಅಭಿವೃದ್ಧಿಗೊಳಿಸುವ ಪ್ರಯತ್ನವನ್ನು ಮಾಡುತ್ತವೆ. ಅವರ ಜೀವನದಲ್ಲಿ ಯಾವುದೇ, ಯಾರದೇ, ಹಂಗಿಗೆ ಒಳಗಾಗದೆ, ಗುಲಾಮಗಿರಿಗೆ ತಮ್ಮನ್ನು ತಾವು ತೊಡಗಿಸಿಕೊಳ್ಳದೆ, ಸ್ವತಂತ್ರವಾಗಿ ಜೀವಿಸುವ ಪ್ರಯತ್ನವಂತೂ ಅರ್ಥಪೂರ್ಣವಾಗಿದೆ.

ಕಾದಂಬರಿಯಲ್ಲಿ ಅಂತಹ ಒಳ್ಳೆಯ ಪಾತ್ರಗಳೆ ತುಂಬಿವೆಯೆಂದು ಹೇಳುವಂತಿಲ್ಲ. ಲಚ್ಚನಂತಹ ಕೆಟ್ಟ ಪಾತ್ರವು ಇದೆ. ಇದು ಇಂದಿನ ಸಮಾಜದ ದೃಷ್ಟಿಯಿಂದ ತುಂಬ ಉಚಿತವೆಂದು ಭಾವಿಸುತ್ತೇನೆ. ಅವನಿಗೆ ಅವರ ತಂದೆ ತಾಯಿಗಳು ಒಳ್ಳೆಯ ಶಿಕ್ಷಣವನ್ನು ಕೊಡಿಸಬೇಕೆಂದು ಚಿಂತಿಸುವುದರಲ್ಲಿ ತಪ್ಪಿಲ್ಲ ಆದರೆ ಮಾತ್ರ ಲಚ್ಚ ಅದನ್ನು ಒಳ್ಳೆಯದಕ್ಕೆ ಬಳಸಿಕೊಳ್ಳದೆ ಆಧುನೀಕರಣದ ಪ್ರಭಾವಕ್ಕೆ ಒಳಗಾಗಿ ಹೇಗೆ ಸಂಪೂರ್ಣವಾಗಿ ಹಾಳಾಗುತ್ತಾನೆ ಎಂಬುದನ್ನು ಆ ಪಾತ್ರದ ಮುಖಾಂತರ ತಿಳಿದುಕೊಳ್ಳಬಹುದು. ಇಂದು ಹಲವಾರು ದುಶ್ಚಟಗಳಿಗೆ ಬಲಿಯಾಗಿ ಇಡೀ ಕುಟುಂಬಗಳನ್ನೇ ನಾಶಮಾಡುವ ಹಂತಕ್ಕೆ ತಲುಪುತ್ತಿರುವ ಜನರಿಗಂತೂ ಒಂದು ಪಾಠವಾಗಿ ಪರಿಣಮಿಸುತ್ತದೆ ಎಂಬ ಅಂಶವನ್ನು ಮನಗಾಣಬಹುದು.

ಯಾವುದೇ ಕಾದಂಬರಿಗಳಲ್ಲಿ ಗಂಡು ಹೆಣ್ಣಿನ ಸಂಬಂಧವನ್ನು ಅಧ್ಯಯನ ಮಾಡುವುದಕ್ಕೆ ಹೊರಟಾಗ ಲೇಖಕನ ಜೀವನ ದರ್ಶನಗಳನ್ನು ಅರ್ಥೈಸಿಕೊಳ್ಳಬಹುದು. ಕಾರಂತರು ಈ ಸಂಬಂಧವನ್ನು ಕಾದಂಬರಿಯಲ್ಲಿ ಚಿತ್ರಿಸುವಾಗ ಬಹಳ ಎಚ್ಚರಿಕೆಯಿಂದಲೇ ಚಿತ್ರಿಸಿದ್ದಾರೆ. ಎಲ್ಲಿಯೂ ಬೇರೆ ಯಾವುದೇ ಆಲೋಚನೆಗಳಿಗೆ ಆಸ್ಪದ ಕೊಟ್ಟಿರುವುದನ್ನು ಕಾದಂಬರಿಯ ಆರಂಭದಿಂದ ಕೊನೆಯವರೆಗೂ ಅಧ್ಯಯನ ಮಾಡಿದಾಗ ಈ ವಿಷಯ ತಿಳಿದುಬರುತ್ತದೆ. ಕಾರಂತರು ಗಂಡು ಹೆಣ್ಣಿನ ಸಂಬಂಧವನ್ನು ಚಿತ್ರಿಸುವಾಗ ಕಾಮವನ್ನು ಆರಾದಿಸದೆ, ದಿಕ್ಕರಿಸದೇ ಸಾಂಪ್ರದಾಯಿಕ ನೆಲೆಯಲ್ಲಿಯೇ ಬಂಧಿಸಿಡುವ ಪ್ರಯತ್ನ ಮಾಡಿದ್ದಾರೆ. ಜೊತೆಗೆ ಗಂಡಿನ ಆಸೆ ಆಕಾಂಕ್ಷೆಗಳನ್ನು ಪೂರೈಸುವ ಪರಿಕರಗಳೆಂದು ಎಲ್ಲಿಯೂ ಚಿತ್ರಿಸಿಲ್ಲವೆಂಬ ವಿಚಾರವನ್ನು ಗ್ರಹಿಸಿಕೊಳ್ಳಬಹುದು.

ಮತ್ತೊಂದು ವಿಚಾರವನ್ನು ಈ ಸಂದರ್ಭದಲ್ಲಿ ಹೇಳುವುದು ಉಚಿತವೆನಿಸುತ್ತದೆ. ಕುಟುಂಬದ ಸಂಪೂರ್ಣ ಜವಾಬ್ದಾರಿಯನ್ನು ನಿಭಾಯಿಸುವುದು ಇವರೇ, ಸಾಮಾಜಿಕ ವಾತಾವರಣದಿಂದ ಹೆದರಿ ಓಡಿ ಹೊಗುವವರು ಗಂಡಸರೇ ಎಂಬ ವಿಚಾರವನ್ನು ಕಾದಂಬರಿ ಅನೇಕ ಸಂದರ್ಭಗಳಲ್ಲಿ ಪ್ರಕಟಿಸುತ್ತದೆ. ಕಾರಂತರು ಹೆಣ್ಣಿನ ವಿಚಾರಗಳಲ್ಲಿ ಸಹಾನುಬೂತಿಯನ್ನು ವ್ಯಕ್ತಪಡಿಸುತ್ತಾರೆ. ಹಾಗಂತ ಗಂಡಿನ ಪಾತ್ರಗಳ ಬಗ್ಗೆ ಕಟುವಾಗಿ ವರ್ತಿಸುತ್ತಾರೆ ಎಂದು ಭಾವಿಸಬಾರದು. ಗಂಡು ಹೆಣ್ಣಿನ ಸಂಬಂಧವನ್ನು ಚಿತ್ರಿಸುವಾಗ ಸಮಾಜದ ಸಾಂಪ್ರದಾಯಕ ಚೌಕಟ್ಟನ್ನು, ಸಾಂಸ್ಕೃತಿಕ ಚೌಕಟ್ಟನ್ನು ಮೀರಿ ಹೊಗುವ ದೃಶ್ಯಗಳಂತೂ ಕಾದಂಬರಿಯಲ್ಲಿ ಪ್ರಸ್ತಾಪಿಸಿಲ್ಲವೆಂದು ಅಧ್ಯಯನ ಮಾಡಿದಾಗ ಗೋಚರಿಸುತ್ತದೆ.

ಪ್ರಾದೇಶಿಕ ಕಾದಂಬರಿ ಎಂಬುದರ ಬಗ್ಗೆ ಎಲ್ಲ ವಿಮರ್ಶಕರು ಒಮ್ಮತದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸಾಮಾನ್ಯವಾಗಿ ಕಾದಂಬರಿಯ ಉದ್ದಕ್ಕೂ ಕೆಲವೊಂದು ಪ್ರಾದೇಶಿಕ ವರ್ಣನೆಯನ್ನು ತಂದು ಪ್ರಾದೇಶಿಕ ವೈಶಿಷ್ಟ್ಯವನ್ನು ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ. ಕರಾವಳಿ ಪ್ರದೇಶದ ಜನ ಜೀವನದ ಚಿತ್ರಣವನ್ನು ಸವಿವರವಾಗಿ ಕೊಡುವ ಕಾದಂಬರಿಯೆಂದು ಭಾವಿಸಬಹುದು. ಅಲ್ಲಿನ ಉಡುಗೆ-ತೊಡುಗೆ, ಆಚಾರ-ವಿಚಾರ ಮುಂತಾದ ವಿಷಯಗಳನ್ನು ಕಾದಂಬರಿಗಳಲ್ಲಿ ಅಧ್ಯಯನ ಮಾಡಿದಾಗ ಇತರ ವಿಷಯಗಳ ಜೊತೆಯಲ್ಲಿಯೇ ಪ್ರಾದೇಶಿಕ ವಿಚಾರಗಳನ್ನು ಹೇಳುವ ಅಥವ ಚಿತ್ರಿಸುವ ಪ್ರಯತ್ನ ಮಾಡಿದ್ದಾರೆಂದು ಭಾವಿಸಿದ್ದೇನೆ. ಹೀಗಾಗಿ ಇದೊಂದು ಕನ್ನಡ ಸಾಹಿತ್ಯ ಕ್ಷೇತ್ರದ ಉತ್ತಮ ಪ್ರಾದೇಶಿಕ ಕಾದಂಬರಿಯೆಂದು ಭಾವಿಸಿದ್ದೇನೆ.

ವಸ್ತುವಿನ ಬಗ್ಗೆ ಪ್ರಸ್ತಾಪಿಸುವಾಗ ಕಾರಂತರೆ "ನನ್ನ ಊರಿನ ಬಡತನದ ಬಾಳ್ವೆಯೇ ಕಥೆಯ ವಸ್ತುವಾಗಿದೆ" ಎಂದು ಹೇಳಿದ್ದಾರೆ. ನಿಜಕ್ಕೂ ಈ ಮಾತು ಸತ್ಯವೆಂದೇ ನಾನು ಸಹ ಭಾವಿಸಿದ್ದೇನೆ. ಏಕೆಂದರೆ ಕಾದಂಬರಿಯು ಊರಿನ ಬಡತನವನ್ನು ಅಲ್ಲಿ ಜೀವಿಸುವ ಜನರ ಚಿತ್ರಣವನ್ನು ಲೇಖಕಕರು ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸಿದ್ದಾರೆ. ಹಾಗಾಗಿ ಒಂದೂರಿನ ಬಡತನವನ್ನೇ ತೆಗೆದುಕೊಂಡು ಒಂದು ಕಾದಂಬರಿಯನ್ನೇ ಬರೆದಿದ್ದಾರೆ. ಆ ಕಾಲ ಘಟ್ಟದಲ್ಲಿ ಇದು ಅನಿವಾರ್ಯ ಎಂಬ ವಿಷಯವು ಬಹು ಪ್ರಮುಖವಾದ ಅಂಶವಾಗಿದೆ.

ಯಾವುದೇ ಕಾದಂಬರಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುವುದು ಎಂದರೆ ಆ ಭಾಷೆ ಜನ ಸಾಮಾನ್ಯರಿಗೆ ಹತ್ತಿರವಾದಾಗ ಮಾತ್ರ, ಹಾಗೆ ತಂತ್ರವು ಸಹ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಕಾದಂಬರಿಯ ಭಾಷೆ ಮತ್ತು ತಂತ್ರಗಳು ಪಾಂಡಿತ್ಯವನ್ನು ಪಡೆದುಕೊಂಡಿರುವವರಿಗೆ ಮಾತ್ರ ಎಂದು ಎಲ್ಲಿಯು ಬರೆದಿಲ್ಲ. ಭಾಷೆಯಾಗಲಿ, ತಂತ್ರವಾಗಲಿ ತುಂಬಾ ಸರಳವಾಗಿ ಜನ ಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಕಾದಂಬರಿಯು ಚಿತ್ರಿತವಾಗಿದೆ. ತಂತ್ರದ ಬಗ್ಗೆ ಕಾರಂತರು ತಲೆ ಕೆಡಿಸಿಕೊಳ್ಳದೆ ನೇರವಾಗಿ ನಿರೂಪಿಸುವ ಪ್ರಯತ್ನ ಮಾಡಿದ್ದಾರೆ ಎಂಬ ಅಂಶವು ಕಾದಂಬರಿಯನ್ನು ಒಳ ಹೊಕ್ಕು ನೋಡಿದಾಗ ತಿಳಿದುಬರುತ್ತದೆ.

**"ನಡೆದಾಡುವ ವಿಶ್ವ ಕೋಶ"** ಎಂಬ ಅನ್ವರ್ಥವನ್ನು ಪಡೆದುಕೊಂಡಿದ್ದ ಶಿವರಾಮ ಕಾರಂತರು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಅಸಾಧಾರಣವಾದ ಬಹು ಮುಖ ಪ್ರತಿಭೆಯನ್ನು ಹೊಂದಿದ್ದವರು. ಅಂತಹವರ ಪ್ರತಿಭೆಯನ್ನು ಒಳಗೊಂಡಿರುವ ಕಾದಂಬರಿಗಳನ್ನು ಕುರಿತು ಅಧ್ಯಯನ ಮಾಡುವುದೆಂದರೆ ಸಾಹಸವೇ ಸರಿ. ಕನ್ನಡ ಸಾಹಿತ್ಯ ಸಂದರ್ಭದಲ್ಲಿನ ಒಬ್ಬ ಮಹತ್ವದ ಕಾದಂಬರಿಕಾರ ಎಂದು ಹೇಳಿದರೆ ಅತಿಶಯೋಕ್ತಿ ಎನಿಸಲಾರದು.

★★★★★★★★

## ಪರಾಮರ್ಶನ ಗ್ರಂಥ ಸೂಚಿ:


೧. ಗಿರಡ್ಡಿ ಗೋವಿಂದ ರಾಜ: ಕಾದಂಬರಿ ವಸ್ತು ಮತ್ತು ತಂತ್ರ,
ಸ್ನೇಹ ಪ್ರಕಾಶನ,
ವಿಜಯನಗರ, ಬೆಂಗಳೂರು, ೧೯೮೭.

೨. ನ. ರವಿಕುಮಾರಿ: (ಸಂ) ಕಾದಂಬರಿ ಕಣ್ಣಲ್ಲಿ ಕಾರಂತರು,
ಪ್ರತಿಭಾಯುವವೇದಿಕೆ,
ರಾಜಾಜಿನಗರ, ಬೆಂಗಳೂರು, ೧೯೯೨.

೩. ಡಿ.ಆರ್. ನಾಗರಾಜ: ಅಮೃತ ಮತ್ತು ಗರುಡ,
ಅಕ್ಷರ ಪ್ರಕಾಶನ,
ಹೆಗ್ಗೋಡು, ಸಾಗರ, ೨೦೦೩.

೪. ಜಸವಂತ ಜಾದವ್: (ಸಂ) ನೀನಾಸಂ ಮಾತುಕತೆ,
ನೀನಾಸಂ,ಹೆಗ್ಗೋಡು, ಸಾಗರ,೨೦೦೨.

೫. ಕು.ಶಿ. ಹರಿದಾಸ ಭಟ್ಟ: (ಸಂ) ಕಾದಂಬರಿ ಪ್ರಪಂಚ,
ಗೀತಾಬುಕ್‌ಹೌಸ್,ಮೈಸೂರು, ೧೯೬೯.

೬. ಯು.ಆರ್. ಅನಂತ ಮೂರ್ತಿ: ಪ್ರಜ್ಞೆ ಮತ್ತು ಪರಿಸರ,
ಅಕ್ಷರಪ್ರಕಾಶನ,
ಹೆಗ್ಗೋಡು, ಸಾಗರ, ೧೯೯೨.

೭. ಡಾ: ಎಸ್.ಕೆ. ಕೊದಂಡರಾಮ: ಕನ್ನಡಕಥಾಸಾಹಿತ್ಯದಲ್ಲಿಸಾಂಸ್ಕೃತಿಕ
ಸಂಘರ್ಷ,

ಗಾಯಿತ್ರಿಸ್ಮಾರಕಗ್ರಂಥಮಾಲೆ,
ಮೈಸೂರು, ೧೯೬೬.

೮. ಜಿ.ಎಸ್. ಶಿವರುದ್ರಪ್ಪ: (ಸಂ) ಹೊಸಗನ್ನಡಕಾವ್ಯದಎರಡುಮಾರ್ಗಗಳು,
ಪ್ರಸಾರಾಂಗ,
ಬೆಂಗಳೂರುವಿಶ್ವವಿದ್ಯಾಲಯ,
ಬೆಂಗಳೂರು,೧೯೮೧.

೯. ಟಿ.ಪಿ. ಅಶೋಕ: ಕಾರಂತರಕಾದಂಬರಿಗಳಲ್ಲಿಗಂಡುಹೆಣ್ಣು,
ಅಕ್ಷರ ಪ್ರಕಾಶನ,
ಸಾಗರ, ಹೆಗ್ಗೋಡು, ೧೯೮೨.

೧೦. ಜಿ.ಎಸ್. ಶಿವರುದ್ರಪ್ಪ: ಗತಿಬಿಂಬ,
ಸುರುಚಿ ಪ್ರಕಾಶನ,
ಮೈಸೂರು, ೧೯೭೪.

೧೧. ಟಿ.ಪಿ. ಅಶೋಕ: ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಆಧುನೀಕರಣದ ಪ್ರಕ್ರಿಯೆ,
ಕರ್ನಾಟಕ ಸಂಘ,
ಪುತ್ತೂರು, ದ.ಕ. ಜಿಲ್ಲೆ, ೧೯೯೦.

೧೨. ಜಿ.ಎಸ್. ಶಿವರುದ್ರಪ್ಪ: ನವೋದಯ,
ನೆಲಮನೆ ಪ್ರಕಾಶನ,
ಕೆ.ಜಿ. ಕೊಪ್ಪಲ್ಲು, ಮೈಸೂರು, ೧೯೮೧.

೧೩. ಕೀರ್ತಿನಾಥ ಕುರ್ತುಕೋಟಿ: ವಿಮರ್ಶೆಯ ವಿನಯ,
ಮನೋಹರ ಗ್ರಂಥಮಾಲೆ,

ಧಾರವಾಡ, ೧೯೯೬.

೧೪. ಡಾ: ಜಿ.ಎಸ್. ಆಮೂರ: ಸಮಾಕಾಲಿನ ಕಥೆ ಕಾದಂಬರಿ ಹೊಸ ಪ್ರಯೋಗಗಳು, ಕನ್ನಡಸಾಹಿತ್ಯಪರಿಷತ್, ಚಾಮರಾಜಪೇಟೆ,ಬೆಂಗಳೂರು,೧೯೮೬.

೧೫. ಜಿ. ಶ್ರೀನಿವಾಸರಾಜು: (ಸಂ) ಕಾರಂತಕಿರಣ, ಬಿ.ಎಂ.ಶ್ರೀಸ್ಮಾರಕಪ್ರತಿಷ್ಠಾನ, ಬೆಂಗಳೂರು, ೨೦೦೪.

೧೬. ಜಿ.ಎಸ್. ಶಿವರುದ್ರಪ್ಪ:(ಸಂ) ಕಾದಂಬರಿಕಾರರಾಗಿಕಾರಂತ, ಪ್ರಸಾರಾಂಗ, ಬೆಂಗಳೂರುವಿಶ್ವವಿದ್ಯಾಲಯ, ಬೆಂಗಳೂರು, ೧೯೮೩.

೧೭. ಶಿವರಾಮು ಕಾಡನಕುಪ್ಪೆ:(ಸಂ) ಅಧ್ಯಯನಗಳು, ಶಿವರಾಮಕಾರಂತಹತ್ತು ಭಾರತಿ ಪ್ರಕಾಶನ, ಮೈಸೂರು, ೧೯೮೨.

೧೮. ಎಲ್.ಎಸ್. ಶೇಷಗಿರಿ ರಾವ್: ಹೊಸಗನ್ನಡ ಸಾಹಿತ್ಯ, ಅಂಕಿತ ಪ್ರಕಾಶನ, ಬೆಂಗಳೂರು, ೧೯೭೫.

೧೯. ಲೀಲಾವತಿ ತೋರಣಗಟ್ಟಿ: ಬೈರಪ್ಪನವರ ಕಾದಂಬರಿಗಳ ಭಾಷೆ, ವಿದ್ಯಾನಿಧಿ ಪ್ರಕಾಶನ, ಗದಗ, ೧೯೯೨.

೨೦. ಕೀರ್ತಿನಾಥ ಕುರ್ತಕೋಟಿ: ಯುಗಧರ್ಮ ಮತ್ತು ಸಾಹಿತ್ಯ ದರ್ಶನ,
ಮನೋಹರ ಗ್ರಂಥಮಾಲೆ,
ಧಾರವಾಡ, ೧೯೯೧.

೨೧. ಟಿ.ಪಿ. ಅಶೋಕ:(ಸಂ) ಕನ್ನಡಸಾಹಿತ್ಯ ಈ ಶತಮಾನದ ನೋಟ,
ಕನ್ನಡವಿಶ್ವವಿದ್ಯಾಲಯಹಂಪಿ,
ಪ್ರಸಾರಾಂಗ, ೧೯೯೩.

೨೨. ಯು.ಆರ್. ಅನಂತ ಮೂರ್ತಿ: ಪೂರ್ವಾಪರ,
ಅಕ್ಷರಪ್ರಕಾಶನ,
ಸಾಗರ, ಹೆಗ್ಗೋಡು,೧೯೯೬.

೨೩. ನಿಯತಕಾಲಿಕೆಗಳು: ಸಾಧನೆ, ಪ್ರಭುದ್ಧ ಕರ್ನಾಟಕ, ಸಾಕ್ಷಿ,
ಸಂಕ್ರಮಣ, ಹೊಸತು, ಅಂಕಣ.



